ಸಂಪುಟ ೧೬  ಸಂಚಿಕೆ ೩                                   ಸೆಪ್ಟೆಂಬರ್ 1995

# ಬ್ಯಾಂಕಿಂಗ್ ಪ್ರಪಂಚ



ವಾರ್ಷಿಕ ಚಂದಾ : ರೂ. 20
ಆಜೀವ ಚಂದಾ : ರೂ. 200

## ಈ ಸಂಚಿಕೆಯಲ್ಲಿ



ಸಮನ್ವಯ ಸಮಿತಿ (ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು)
ಭಾರತೀಯ ಸ್ಟೇಟ್ ಬ್ಯಾಂಕ್, ನಂ, ೨೨ ಜಯಚಾಮರಾಜೇಂದ್ರ ರಸ್ತೆ, ಬೆಂಗಳೂರು ೫೬೦ ೦೦೨

ಹಣ ಬ್ಯಾಂಕಿಂಗ್ ವಿಚಾರಗಳಿಗೆ ಮೀಸಲಾದ ತ್ರೈಮಾಸಿಕ

# ಉದರಿ ಮಾಪನ

ಜಿ. ಎನ್. ನರಸಿಂಹಮೂರ್ತಿ
ಸೇವಾ ಶಾಖೆ, ಭಾರತೀಯ ಸ್ಟೇಟ್ ಬ್ಯಾಂಕ್, ಸಂತ ಮಾರ್ಕರ ರಸ್ತೆ, ಬೆಂಗಳೂರು-೫೬೦ ೦೦೧

**ಉದರಿ ಪಡೆಯುವವನ ಯೋಗ್ಯತೆಯ ಹಾಗೂ ಸಾಮರ್ಥ್ಯದ ಮಾಪನವೇ ಉದರಿ ಮಾಪನ. ತಾವು ಕೊಡುವ ಸಾಲದ ಹಣ ಎಷ್ಟು ಭದ್ರ, ಅದು ಎಷ್ಟು ಸಲೀಸಾಗಿ ಹಿಂದಿರುಗಿ ಬಂದೀತು ಎಂದು ಸಾಲಿಗರು ವಿಚಾರ ಮಾಡಿಯೇ ಸಾಲ ನೀಡುವ ಬಗ್ಗೆ ತೀರ್ಮಾನ ಕೈಗೊಳ್ಳುತ್ತಾರೆ. ಇದು ಅನೂಚಾನವಾಗಿ ನಡೆದುಕೊಂಡು ಬಂದಿರುವ ಸಂಗತಿ.**

**ಆದರೆ ಇದು ಇಂದು ಒಂದು ಸಂಕೀರ್ಣ ಪ್ರಕ್ರಿಯೆ. ನಾನಾ ಉದ್ದೇಶಗಳಿಗಾಗಿ ಉದರಿ ಮಾಪನ ನಡೆಯುತ್ತದೆ. ಈ ಕಾರ್ಯ ಕೈಗೊಳ್ಳುವ ವಿಶಿಷ್ಟ ಸಂಸ್ಥೆಗಳೂ ಬೆಳೆದಿವೆ.**

ತುಂಬ ಸರಳವಾಗಿ ಹೇಳುವುದಾದರೆ ಉದರಿ ಮಾಪನ (ಕ್ರೆಡಿಟ್ ರೇಟಿಂಗ್) ಉದರಿ ಪಡೆಯುವವನ ಮಾಪನವೇ ಆಗಿರುತ್ತದೆ. ಉದರಿ ನೀಡಿಕೆಯಷ್ಟೇ ಅನೂಚಾನವಾಗಿ ಉದರಿ ಮಾಪನವೂ ನಡೆದುಕೊಂಡೇ ಬಂದಿದೆ. ಒಂದು ಕಾಲದಲ್ಲಿ ಉದರಿ ಪಡೆಯುವವನ ಪ್ರಾಮಾಣಿಕತೆಯೊಂದೇ ಉದರಿ ಮಾಪನವಾಗಿದ್ದು, ಕಾಲ ಕಳೆದಂತೆ, ಬದುಕು ಸಂಕೀರ್ಣವಾದಂತೆ ತನ್ನ ಸ್ವರೂಪವನ್ನು ಬದಲಿಸಿಕೊಳ್ಳುತ್ತ, ಸಂಕೀರ್ಣಗೊಳ್ಳುತ್ತ ಬಂದು, ಇಂದು ಸ್ವಾಯತ್ತ ಸಂಸ್ಥೆಗಳ ಪೂರ್ಣಪ್ರಮಾಣದ ಕಾರ್ಯಭಾರವಾಗಿ ಬಿಟ್ಟಿದೆ. ಇದರಿಂದ ಉದರಿಮಾಪನ, ಅದರ ವಿಧಾನಗಳು ಸಹಜವಾಗಿ ಎಲ್ಲರ ಕುತೂಹಲವನ್ನೂ ಕೆರಳಿಸುತ್ತವೆ. ಉದರಿ ಮಾಪನದ ಆವಶ್ಯಕತೆಗಳು, ಉಪಯೋಗಗಳು, ಅದಕ್ಕಾಗಿ ಬಳಸುವ ಮಾಹಿತಿಯ ಗಾತ್ರ, ಮಾಹಿತಿಯ ಬಗೆಗಳು ಇವೆಲ್ಲ ನಮ್ಮ ಕಣ್ಮುಂದೆ ಬಂದಾಗ, ಅವು ನಮ್ಮನ್ನು ಚಕಿತಗೊಳಿಸುತ್ತವೆ.

ಉದರಿ ಮಾಪನ ಅನೂಚಾನವಾಗಿ ಭಾರತದಲ್ಲಿ ನಡೆದುಕೊಂಡು ಬಂದಿದ್ದರೂ, ಅದು ಈಗಿನ ವ್ಯಾಪ್ತಿಯನ್ನೂ ಸಂಕೀರ್ಣತೆಯನ್ನೂ ಪಡೆದುಕೊಂಡದ್ದು ಬ್ಯಾಂಕಿಂಗ್ ಹಾಗೂ ಬಂಡವಾಳಪೇಟೆ ಚೆನ್ನಾಗಿ ಅಭಿವೃದ್ಧಿ ಹೊಂದಿದ ಪಾಶ್ಚಾತ್ಯ ರಾಷ್ಟ್ರಗಳಲ್ಲಿಯೇ.

ಉದರಿ ಮಾಪನ ಇಂದು ಅನೇಕ ಉದ್ದೇಶಗಳಿಗಾಗಿ ನಡೆಯುತ್ತಿದೆ. ಖಾಸಗಿ ಕಂಪನಿಯೊಂದು ನೀಡುವ ಋಣ ಸಂಲೇಖಗಳು (ಉದಾ : ಡಿಬೆಂಚರುಗಳು, ನಿಶ್ಚಿತ ಅವಧಿ ಠೇವಣಿಗಳು ಇತ್ಯಾದಿ), ಬೃಹತ್ ಕಂಪನಿಗಳು (ಸರ್ಕಾರಿ ಸ್ವಾಮ್ಯದ ಕಂಪನಿಗಳೂ ಸೇರಿದಂತೆ) ನೀಡುವ ಬಂಡವಾಳ ಪೇಟೆ ಹಾಗೂ ಹಣ ಮಾರುಕಟ್ಟೆ ಸಂಲೇಖಗಳು ಮುಂತಾದವೇ ಅಲ್ಲದೆ ಇಡೀ ದೇಶದ ಆರ್ಥಿಕ ಸ್ಥಿತಿಯನ್ನೇ ಉದರಿ ಮಾಪನ ತನ್ನ ತೆಕ್ಕೆಗೆ ತೆಗೆದುಕೊಂಡಿದೆ. 1991ಕ್ಕೆ ಮುಂಚೆ ಭಾರತವನ್ನು 'ವಿನಿಯೋಜನಯೋಗ್ಯ' ಎಂಬ ದರ್ಜೆಗಿಂತ ಕೆಳದರ್ಜೆಯಲ್ಲಿರಿಸಿದ್ದ ಕೆಲ ಪಾಶ್ಚಾತ್ಯ ಉದರಿಮಾಪನ ಕಂಪನಿಗಳು ಇತ್ತೀಚೆಗೆ ಅದನ್ನು ವಿನಿಯೋಜನಯೋಗ್ಯ ದರ್ಜೆಗೆ ಏರಿಸಿದ್ದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಹೀಗೆ ಎಲ್ಲೆಲ್ಲಿ ಉದರಿ ಇದೆಯೋ ಅಲ್ಲೆಲ್ಲ ಉದರಿ ಮಾಪನವೂ ಇದ್ದು ವ್ಯಾಪಕವಾದ ಅಸ್ತಿತ್ವವನ್ನು ಹೊಂದಿದೆ.

ಪಾಶ್ಚಾತ್ಯ ದೇಶಗಳಲ್ಲಿ ಎಷ್ಟೋ ಕಾಲದಿಂದ ಇರುವ ಉದರಿ ಮಾಪನ ವ್ಯವಸ್ಥೆ ಇತ್ತೀಚಿನ ವರ್ಷಗಳಲ್ಲಿ ಭಾರತಕ್ಕೂ ಕಾಲಿರಿಸಿದೆ, ತಕ್ಕ ಮಟ್ಟಿನ ಬೆಳವಣಿಗೆಯನ್ನೂ ಸಾಧಿಸಿದೆ. ಭಾರತದಲ್ಲಿ ಇದರ ಸ್ವರೂಪವನ್ನು ಗಮನಿಸುವುದು ಈ ಲೇಖನದ ಉದ್ದೇಶವಾಗಿದೆ.

ಉದರಿ ಮಾಪನಕ್ಕೆ ಸಂಬಂಧಿಸಿದಂತೆ ಮುಖ್ಯವಾಗಿ ಮೂರು ಅಂಶಗಳಿವೆ : (1) ಆವಶ್ಯಕತೆ, (2) ವಿಧಾನ, (೩) ಬಳಕೆ ಹಾಗೂ ಉಪಯುಕ್ತತೆ.

**ಆವಶ್ಯಕತೆ**

ಉದರಿ ಮಾಪನದ ಆವಶ್ಯಕತೆ ವಿವಿಧ ಸಂಸ್ಥೆಗಳಿಗೆ ವಿವಿಧ ಸಂಗತಿಗಳನ್ನು ಕುರಿತು ಇರುತ್ತದೆ. ಸ್ಥೂಲವಾಗಿ ಅವನ್ನು ಹೀಗೆ ವರ್ಗೀಕರಿಸಬಹುದು :

1 ಬಂಡವಾಳ ಪೇಟೆ ಸಂಲೇಖಗಳನ್ನು ಕುರಿತು ವಿನಿಯೋಜಕರಿಗೆ,

2 ದೊಡ್ಡ ಪ್ರಮಾಣದ ಉದರಿ ಬೇಡಿಕೆ ಸಲ್ಲಿಸುವ ಉದ್ಯಮ/ಸಂಸ್ಥೆಗಳ ಕುರಿತು ಆ ಉದರಿ ನೀಡುವ ಬ್ಯಾಂಕುಗಳಿಗೆ,

3 ಕಂಪನಿಯೊಂದನ್ನು ಬೇರೆ ಕಂಪನಿ ವಶಾವಣೆ ಮಾಡಿಕೊಳ್ಳುವಾಗ ವಶಾವಣೆ ಮಾಡಿಕೊಳ್ಳುವ ಕಂಪನಿಗೆ, ವಶಾವಣೆಯಾಗಬೇಕಾದ ಕಂಪನಿ ಕುರಿತಾದ ಉದರಿ ಮಾಪನ ಮಾಹಿತಿ ಆವಶ್ಯಕ,

4 ಉದರಿ ಬೇಡುವ ದೇಶಗಳ ಕುರಿತಾಗಿ ಉದರಿ ನೀಡುವ ದೇಶಗಳಿಗೆ,

5 ತೀರ ವೈಯಕ್ತಿಕ ಎನಿಸಿದ ಉದರಿಮಾಪನ ಸಹ ಎಷ್ಟೋ ವೇಳೆ ಆವಶ್ಯಕವಾಗುತ್ತವೆ. ಸಂಲೇಖಗಳನ್ನು ನೀಡುವ

ಕಂಪನಿಯೇ ತನ್ನನ್ನು ಕುರಿತು ಉದರಿಮಾಪನವನ್ನು ಬಯಸು ತ್ತದೆ. ಈ ಅಂಶಗಳನ್ನು ಸ್ವಲ್ಪ ವಿವರವಾಗಿ ಪರಿಶೀಲಿಸುವುದು ಉಪಯುಕ್ತವಾಗಬಹುದು.

### ಬಂಡವಾಳ ಪೇಟೆ ಸಂಲೇಖಗಳು

ತೀರ ಇತ್ತೀಚಿನವರೆಗೆ ಬಂಡವಾಳ ಪೇಟೆಯಲ್ಲಿ ನೀಡಲಾಗುವ ಸಂಲೇಖಗಳ ಕುರಿತಾಗಿ ವಿನಿಯೋಜಕರಿಗೆ ಹೆಚ್ಚು ಮಾಹಿತಿ ಲಭ್ಯ ವಾಗುತ್ತಿರಲಿಲ್ಲ. ಸಂಲೇಖಗಳನ್ನು ನೀಡುವ ಕಂಪನಿ ಷೇರು ನೀಡಿಕೆ ಸಂದರ್ಭದಲ್ಲಿ ವಿನಿಯೋಜಕರಿಗೆ ಒದಗಿಸುತ್ತಿದ್ದ ವಿವರಣಪತ್ರದಲ್ಲಿ (ಪ್ರಾಸ್ಪೆಕ್ಟಸ್) ವ್ಯಕ್ತವಾದ ಮಾಹಿತಿ ಮಾತ್ರವೇ ವಿನಿಯೋಜಕ ರಿಗೆ ದೊರೆಯುತ್ತಿತ್ತು. ಬಂಡವಾಳ ನೀಡಿಕೆ ನಿಯಂತ್ರಣಾಧಿಕಾರಿ (ಕಂಟ್ರೋಲರ್ ಆಫ್ ಕ್ಯಾಪಿಟಲ್ ಇಶ್ಯೂಸ್) ಹಾಗೂ ಈ ವ್ಯವಸ್ಥೆ ರದ್ದಾದ ನಂತರ ಭಾರತೀಯ ಪ್ರತಿಭೂತಿ ಮತ್ತು ವಿನಿಮಯ ಮಂಡಳಿ (ಸೆಬಿ) ಮತ್ತು ನೀಡಿಕೆಯನ್ನು ಪ್ರವರ್ತಿಸುವ ಅಭಿಕರಣಗಳು (ಮುಖ್ಯವಾಗಿ ವಣಿಕ ಬ್ಯಾಂಕುಗಳು) ಕಂಪನಿಯ ನೀಡಿಕೆ ಪತ್ರದಲ್ಲಿರುವ ಅಂಶಗಳ ವಿಶ್ವಾಸಾರ್ಹತೆ, ಖಚಿತತೆಗಳ ಕುರಿತು ಒಂದು ಬಗೆಯ ಖಾತರಿಯನ್ನು ನೀಡುವಷ್ಟರ ಮಟ್ಟಿಗೆ ಮಾಹಿತಿಗಳನ್ನು ಪರಿಶೀಲಿಸುವ ಕೆಲಸವನ್ನು ಮಾಡುತ್ತಿದ್ದವು/ ಮಾಡುತ್ತಿವೆ. ಆದರೆ ವಿನಿಯೋಜಕರಿಗೆ ಇವು ಕಂಪನಿಗಳ ಬಗೆಗೆ ಯಾವುದೇ ಮಾನದಂಡದಿಂದ ಅಳೆದು ಹೂಡಿಕೆಯ ಕುರಿತಾಗಿ ಭದ್ರತೆಯ ದೃಷ್ಟಿಯಿಂದ ತೃಪ್ತಿಕರವಾದ ವರ್ಗೀಕರಣ ಮಾಡು ತ್ತಿರಲಿಲ್ಲ. ಅಲ್ಲದೆ ವಣಿಕ ಬ್ಯಾಂಕುಗಳು ತಮ್ಮ ವ್ಯವಹಾರದ ಅಂಗ ವಾಗಿ, ಸೆಬಿ ಸರ್ಕಾರದ ಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಿದ್ದು, ಅನೇಕ ವಿವರಗಳು ವಿನಿಯೋಜಕರನ್ನು ತಲುಪುತ್ತಿರಲಿಲ್ಲ. ಇತ್ತೀಚಿನ ಎಂ. ಎಸ್. ಷೂಸ್ ಹಗರಣ ಇದಕ್ಕೊಂದು ಜ್ವಲಂತ ಉದಾಹರಣೆ. ಅಮಾಯಕ ವಿನಿಯೋಜಕರಿಗೆ ಪೂರ್ಣ ವಿವರ ಗಳನ್ನು ನೀಡದೆ ಅವರನ್ನು ಕಷ್ಟನಷ್ಟಗಳಿಗೆ ಪಕ್ಕಾಗಿಸುವುದು ಬಂಡವಾಳ ಪೇಟೆಯಲ್ಲಿ ಅಪಾರ ಅನುಭವ ಗಳಿಸಿಕೊಂಡಿರುವ ಅನೇಕ ಉದ್ಯಮಿಗಳಿಗೆ ಸುಲಭದ ಸಂಗತಿಯಾಗಿಬಿಟ್ಟಿದೆ. ಇಂತಹ ಸಂದರ್ಭದಲ್ಲಿ ನೀಡಿಕೆ ಕಂಪನಿಗಳನ್ನು ಕುರಿತು ಸ್ವತಂತ್ರವಾಗಿ ಅಧ್ಯಯನ ನಡೆಸಿ ಉದರಿ ಮಾಪನ ಮಾಡಿ ಆ ಕುರಿತ ಮಾಹಿತಿ ಯನ್ನು ವಿನಿಯೋಜಕರಿಗೆ ಒದಗಿಸುವ ವ್ಯವಸ್ಥೆಯೊಂದರ ಆವಶ್ಯ ಕತೆ ಇದ್ದೇ ಇದೆ. ಇಂತಹ ಸಂಸ್ಥೆ ಒದಗಿಸುವ ಮಾಹಿತಿಗಳು ವಿನಿ ಯೋಜಕನಿಗೆ ತನ್ನ ಆಯ್ಕೆಗಳನ್ನು ಹೆಚ್ಚಿನ ಮಾಹಿತಿಯ ಬೆಳಕಿ ನಲ್ಲಿ ನೋಡಲು ಅನುವುಮಾಡಿಕೊಟ್ಟು, ಸ್ವಲ್ಪ ಮಟ್ಟಿಗಾದರೂ, ನಿರ್ಣಯ ತೆಗೆದುಕೊಳ್ಳುವಲ್ಲಿ ಸಹಾಯಕವಾಗುತ್ತವೆ.

### ದೊಡ್ಡ ಪ್ರಮಾಣದ ಉದರಿ ನೀಡುವ ಬ್ಯಾಂಕುಗಳು/ ಹಣಕಾಸು ಸಂಸ್ಥೆಗಳು

ಮುಖ್ಯವಾಗಿ ವಾಣಿಜ್ಯ ಬ್ಯಾಂಕುಗಳು, ಹಣಕಾಸು ಸಂಸ್ಥೆಗಳಲ್ಲಿ (ಉದಾ : ಐಡಿಬಿಐ, ಐಸಿಐಸಿಐ, ಯೂನಿಟ್ ಟ್ರಸ್ಟ್) ಸಾಮಾನ್ಯ ವಾಗಿ ಉದರಿ ನಿರ್ಧರಣೆ ಕುರಿತಾದ ಪರಿಣತ ಸಿಬ್ಬಂದಿವರ್ಗ ಇದ್ದು ಉದರಿ ಮಾಪನವನ್ನು ತಾವೇ ಮಾಡುತ್ತವೆ. ಈ ಕ್ರಿಯೆಯಲ್ಲಿ ಅವು ಉದರಿ ಬೇಡುವ ಕಂಪನಿಯ/ಗ್ರಾಹಕನ ಹಣಕಾಸು ವಿಷಯ ಗಳನ್ನು ವಿವರವಾಗಿ ಪರಿಶೀಲಿಸುತ್ತವೆ. ಆದರೆ ಉದರಿ ಮಾಪನ ಸಂಸ್ಥೆ ಇವುಗಳಿಗಿಂತ ಹೆಚ್ಚು ಬಗೆಯ ನಿಖರ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಿ ತೀರ್ಮಾನ ಕೈಗೊಳ್ಳುವುದರಿಂದ, ಈ ತೀರ್ಮಾನಗಳು ಬ್ಯಾಂಕು/ಹಣಕಾಸು ಸಂಸ್ಥೆಗಳು ಉದರಿ ನೀಡಿಕೆ ಕುರಿತಾಗಿ ಕ್ಷಿಪ್ರನಿರ್ಧಾರ ತೆಗೆದುಕೊಳ್ಳಲು ಅನುಕೂಲ ಮಾಡಿ ಕೊಡುತ್ತವೆ. ಹಾಗೂ ಹೊಸ ಕಂಪನಿ/ಗ್ರಾಹಕರ ಕುರಿತಾದ ಸಿದ್ಧ ಮಾಹಿತಿ ಉದರಿ ಮಾಪನ ಸಂಸ್ಥೆಗಳಿಂದ ಶೀಘ್ರವಾಗಿ ಲಭ್ಯವಾಗು ತ್ತದೆ. ಹೀಗಾಗಿ ಉದರಿ ಮಾಪನ ವ್ಯವಸ್ಥೆ, ಇಂದಿನ ಮುಕ್ತ ವಾತಾವರಣದಲ್ಲಿ ದಿನದಿನವೂ ಅನೇಕ ಹೊಸ ಕಂಪನಿಗಳು ಹುಟ್ಟು ತ್ತಿರುವ ಸಂದರ್ಭದಲ್ಲಿ ಬ್ಯಾಂಕು/ಹಣಕಾಸು ಸಂಸ್ಥೆಗಳಿಗೆ ಒಂದು ಅಗತ್ಯವಾಗಿದೆ.

### ವಶಾವಣೆ ಸಂದರ್ಭದಲ್ಲಿ

ಒಂದು ಕಂಪನಿ ಇನ್ನೊಂದು ಕಂಪನಿ/ಉದ್ಯಮಘಟಕವನ್ನು ವಶಾವಣೆ ಮಾಡಿಕೊಳ್ಳುವ ಸಂದರ್ಭದಲ್ಲಿ ಆ ಇನ್ನೊಂದು ಕಂಪನಿಯ ಬಗೆಗೆ ಆಳವಾದ ಅಧ್ಯಯನ ನಡೆಸುತ್ತದೆ. ಈ ಕೆಲಸ ವನ್ನು ಉದರಿ ಮಾಪನವ್ಯವಸ್ಥೆ ಹಗುರಗೊಳಿಸುತ್ತದೆ.

### ದೇಶಗಳ ಆರ್ಥಿಕ ವ್ಯವಸ್ಥೆ

ಬೇರೆ ಬೇರೆ ದೇಶಗಳಲ್ಲಿ ಬಂಡವಾಳ ಹೂಡಬಯಸುವ ವಿನಿಯೋಜ ಕರಿಗೆ ವಿನಿಯೋಜನೆ ಮಾಡಬೇಕಾದ ಕಂಪನಿ/ಘಟಕದ ಕುರಿತ ಮಾಹಿತಿಗಳ ಜತೆಗೆ, ಅದಕ್ಕೂ ಮೊದಲು, ಆ ದೇಶದ ಆರ್ಥಿಕ ಪರಿಸ್ಥಿತಿ ಕುರಿತಾಗಿ ಉದರಿ ಮಾಪನ ಮಾಹಿತಿ ಅತ್ಯಾವಶ್ಯಕವಾಗಿರು ತ್ತದೆ. ಯಾವ ವಿನಿಯೋಜಕನೂ ತನ್ನ ಹಣಕಾಸು ಸಂಪನ್ಮೂಲ ವನ್ನು ಇನ್ನೊಂದು ದೇಶದಲ್ಲಿ ಮಾಹಿತಿಯ ಅಭಾವದಲ್ಲಿ ವಿನಿಯೋಜಿಸಲು ಬಯಸುವುದಿಲ್ಲ. ಉದಾಹರಣೆಗೆ ಈ ಲೇಖನದ ಪ್ರಾರಂಭದಲ್ಲಿ ಪ್ರಸ್ತಾಪಿಸಿದ ಭಾರತದ ಸಂಗತಿಯೇ ಇದೆ. 'ಸ್ಟ್ಯಾಂಡರ್ಡ್ ಮತ್ತು ಪೂರ್' ಹಾಗೂ 'ಮೂಡಿ' ಎಂಬ ಅಮೆರಿಕದ ಉದರಿ ಮಾಪನ ಕಂಪನಿಗಳು ದೇಶದೇಶಗಳ ಕುರಿತಾದ ಉದರಿ ಮಾಪನಕ್ಕೆ ಹೆಸರಾಗಿವೆ.

ಹೀಗೆ ಉದರಿ ಮಾಪನದ ಆವಶ್ಯಕತೆ ಅನೇಕ ಬಗೆಗಳಲ್ಲಿ ಕಂಡು ಬರುತ್ತದೆ. ಕೇವಲ ಉದರಿ ಮಾಪನವೊಂದೇ ವಿನಿಯೋಜಕನ ಎಲ್ಲ ಸಮಸ್ಯೆಗಳನ್ನೂ ಬಗೆಹರಿಸುತ್ತವೆ, ಎಂದಲ್ಲ. ಆದರೆ ಉದರಿ ಮಾಪನ ವಿನಿಯೋಜನಾ ನಿರ್ಧಾರದಲ್ಲಿ ಒಂದು ಆವಶ್ಯಕ ಸಾಧನ ಎಂಬುದಂತೂ ನಿಜ.

## ಉದರಿ ಮಾಪನ ವಿಧಾನ

ಉದರಿ ಮಾಪನ ಅಷ್ಟೇನೂ ಸುಲಭದ ಕೆಲಸವಲ್ಲ. ವಿವಿಧ ಉದರಿ ಮಾಪನ ಸಂಸ್ಥೆಗಳು ತಮ್ಮವೇ ಆದ ವಿಧಾನಗಳನ್ನು ಅನುಸರಿಸಿ ತಮ್ಮವೇ ಆದ ಶ್ರೇಣಿ/ದರ್ಜೆಗಳಲ್ಲಿ ಉದರಿ ಮಾಪನವನ್ನು ಅಭಿವ್ಯಕ್ತಿಸುತ್ತವೆ. ಭಾರತದಲ್ಲಿ ಕ್ರಿಸಿಲ್ (ಸಿಆರ್‌ಐಎಸ್‌ಐಎಲ್—ಕ್ರೆಡಿಟ್ ರೇಟಿಂಗ್ ಇನ್‌ಫರ್ಮೇಷನ್ ಸಿಸ್ಟಮ್ ಲಿಮಿಟೆಡ್) ಎಂಬ ಸಂಸ್ಥೆ ಮೊಟ್ಟಮೊದಲು ಉದರಿ ಮಾಪನವನ್ನು ಈಗ್ಗೆ ಕೆಲವು ವರ್ಷಗಳ ಹಿಂದೆ ಪ್ರಾರಂಭಿಸಿತು. ಅನಂತರ ಇಕ್ರಾ (ಐಸಿಆರ್—ಇನ್‌ವೆಸ್ಟ್‌ಮೆಂಟ್ ಇನ್‌ಫರ್ಮೇಷನ್ ಕ್ರೆಡಿಟ್ ರೇಟಿಂಗ್ ಏಜೆನ್ಸಿ), ಕೇರ್ (ಸಿಎಆರ್‌ಇ—ಕ್ರೆಡಿಟ್ ಅನಾಲಿಸಿಸ್ ಅಂಡ್ ರಿಸರ್ಚ್ ಎಸ್ಟಾಬ್ಲಿಷ್‌ಮೆಂಟ್) ಮುಂತಾದವು ಉದರಿಮಾಪನದಲ್ಲಿ ಉದ್ಯುಕ್ತವಾಗಿವೆ.

ಇವುಗಳ ಕಾರ್ಯವಿಧಾನ ಬೇರೆಬೇರೆಯಾದರೂ, ಇವು ಗಮನಿಸುವ ಮುಖ್ಯವಾದ ಅಂಶಗಳು ಸ್ಥೂಲವಾಗಿ ಒಂದೇ ಆಗಿರುತ್ತವೆ.

ಅವನ್ನು ಹೀಗೆ ನಿರೂಪಿಸಬಹುದು :

ಉದರಿ ಮಾಪನ ಮಾಡಬೇಕಾಗಿರುವ ಕಂಪನಿಯ/ಘಟಕದ ಆರ್ಥಿಕ ಸ್ಥಿತಿಗತಿಗಳ ವಿವರವಾದ ವಿಶ್ಲೇಷಣೆ, ಆಸ್ತಿ-ಹೊಣೆಗಳ ಸ್ವರೂಪ, ಗಾತ್ರ, ದ್ರವ್ಯತೆ, ಕಂಪನಿ/ಘಟಕ ಉತ್ಪಾದಿಸುವ ವಸ್ತುವಿನ ಗುಣಮಟ್ಟ, ಮಾರುಕಟ್ಟೆಯಲ್ಲಿ ಅದಕ್ಕಿರುವ ಬೇಡಿಕೆ, ಅಲ್ಲಿ ಅದು ಎದುರಿಸಬೇಕಾದ ಸ್ಪರ್ಧೆ, ಉತ್ಪಾದನೆಯ ಮಾರುಕಟ್ಟೆ ಬೆಲೆ, ಉತ್ಪಾದನ ವೆಚ್ಚ ಮುಂತಾದ ಎಲ್ಲ ಅಂಶಗಳ ಪರಿಗಣನೆಯಲ್ಲಿ ಅದರ ಲಾಭಪ್ರದತೆಯನ್ನು ಅಂದಾಜು ಮಾಡುವುದು ಮೊದಲ ಹಂತದ ಕೆಲಸವಾಗುತ್ತದೆ. ಕಂಪನಿಯ ಇತರ ಉತ್ಪನ್ನಗಳ (ಇದ್ದರೆ) ಕುರಿತ ಮಾರುಕಟ್ಟೆ ವಿವರಗಳು, ಕಂಪನಿಗೆ ವಿವಿಧೀಕರಣಕ್ಕಿರುವ ಅವಕಾಶ, ಗುಣಮಟ್ಟವನ್ನು–ಉತ್ಪನ್ನಗಳ–ಹೆಚ್ಚಿಸಲು ಅಗತ್ಯವಾದ ಕ್ರಮಗಳು, ಇರುವ ಅವಕಾಶಗಳು, ಹೊಸ ತಂತ್ರಜ್ಞಾನದ ಅಭಿವೃದ್ಧಿ/ಅಳವಡಿಕೆಗಳಿಂದ ಉತ್ಪಾದನ ವೆಚ್ಚ ತಗ್ಗಿಸುವ ಸಾಧ್ಯತೆಗಳು, ತಂತ್ರಜ್ಞಾನದ ಆಮದಿನಿಂದ/ಸುಧಾರಣೆಗಳಿಂದ ಉತ್ಪನ್ನಕ್ಕಿರುವ ಬೇಡಿಕೆಯ ಏರಿಕೆ/ಕುಸಿತಗಳು ಮುಂತಾದ ಅಂಶಗಳನ್ನು ಕುರಿತು ಉದರಿ ಮಾಪನ ಸಂಸ್ಥೆ ಅಧ್ಯಯನ ನಡೆಸಬೇಕಾಗುತ್ತದೆ.

ಕಂಪನಿಯ ಪ್ರವರ್ತಕರ ಹಿನ್ನೆಲೆ, ಅವರ ವೈಯುಕ್ತಿಕ ಸ್ಥಾನಮಾನ, ಆಸ್ತಿಪಾಸ್ತಿಗಳು, ಅನುಭವ, ದಕ್ಷತೆ, ಅವರದೇ ಆದ ಇತರ ಕಂಪನಿಗಳ ಎಲ್ಲ ವಿದ್ಯಮಾನಗಳು, ಪ್ರವರ್ತಕರು/ಆಡಳಿತವರ್ಗ ರೂಢಿಸಿಕೊಂಡಿರುವ ಕೈಗಾರಿಕಾ ಸಂಬಂಧಗಳು—ಇವೇ ಮುಂತಾದವನ್ನು ಕೂಡ ಉದರಿ ಮಾಪನಕಾರರು ಕೂಲಂಕಷವಾಗಿ ಗಮನಿಸಬೇಕಾಗುತ್ತದೆ.

ಈ ಎಲ್ಲ ಅಧ್ಯಯನದ ಹಿನ್ನೆಲೆಯಲ್ಲಿ ಕಂಪನಿಯ ಉದರಿ ಮರುಪಾವತಿ ಸಾಮರ್ಥ್ಯವನ್ನು ನಷ್ಟಸಂಭಾವ್ಯತೆಗೆ ಹೋಲಿಸಿ ಉದರಿ ಮಾಪನ ಮಾಡಲಾಗುತ್ತದೆ. ಇದನ್ನು ಅಂಕ/ಶ್ರೇಣಿ/ದರ್ಜೆಗಳ ರೂಪದಲ್ಲಿ ಪ್ರಕಟಿಸಲಾಗುತ್ತದೆ. ಅತ್ಯಂತ ಹೆಚ್ಚಿನ ಅಂಕ/ದರ್ಜೆ ಉದರಿ ಮರುಪಾವತಿ ಸಾಮರ್ಥ್ಯ ಕಂಪನಿಗಿದೆ ಎಂದು ಸೂಚಿಸಿದರೆ, ಕೆಳಸರಿದಂತೆ ನಷ್ಟ ಸಂಭವ ಹೆಚ್ಚಾಗುತ್ತ ಹೋಗುತ್ತದೆ. ಈ ಅಂಕ/ಶ್ರೇಣಿ/ದರ್ಜೆಗಳು ವಿವಿಧ ಉದರಿಮಾಪನ ಸಂಸ್ಥೆಗಳಲ್ಲಿ ವಿವಿಧ ಬಗೆಯವಾಗಿರುತ್ತವೆ. (ಉದಾಹರಣೆ : $A + FAAP_1P_2$ ಇತ್ಯಾದಿ.)

ಉದರಿ ಮಾಪನದ ಕೆಲಸ ಸುಲಭವಾದುದಲ್ಲ. ಉದರಿ ಮಾಪನ ವಿನಿಯೋಜಕರ ನಂಬಿಕೆಗೆ ಅರ್ಹ ಎನಿಸಿಕೊಳ್ಳಲು ಅವು ನೀಡುವ ಮಾಹಿತಿ/ತೀರ್ಮಾನಗಳು ಅತ್ಯಂತ ಖಚಿತ/ನಿಷ್ಕೃಷ್ಟವಾಗಿರಬೇಕಾಗುತ್ತದೆ.

ಈ ಉದರಿ ಮಾಪನಗಳು ಎಷ್ಟೇ ನಿಷ್ಕೃಷ್ಟವಾದರೂ ಬದಲಾದ ಪರಿಸ್ಥಿತಿಯಲ್ಲಿ ಹಾಗೇ ಉಳಿಯಲಾರವು. ಅದಕ್ಕಾಗಿಯೇ ಈ ಮಾಪನ ಒಂದು ವರ್ಷದ ಅವಧಿಗೆ ಮಾತ್ರ ಸೀಮಿತವಾಗಿರುತ್ತದೆ. ಜತೆಗೆ ಯಾವ ಸಂಸ್ಥೆಯ ಉದರಿ ಮಾಪನ ಮಾಡಲಾಗುತ್ತದೆಯೋ ಆ ಸಂಸ್ಥೆ ಮಾಪನ ದರ್ಜೆಯನ್ನು ಒಪ್ಪಿದಲ್ಲಿ ಮಾತ್ರ ಆ ದರ್ಜೆಯನ್ನು ನೀಡಿ ಪ್ರಕಟಿಸಲಾಗುತ್ತದೆ.

ಷೇರು ನೀಡಿಕೆಗೆ ಉದರಿ ಮಾಪನ ಮಾಡುವುದಿಲ್ಲ. ಒಂದು ವರ್ಷದ ಅವಧಿ ಸಾಲಪತ್ರಗಳಿಗೆ ಮಾತ್ರವಿದ್ದು ದೇಶವೊಂದರ ಆರ್ಥಿಕ ಪರಿಸ್ಥಿತಿ ಕುರಿತು ಉದರಿ ಮಾಪನಕ್ಕೆ ಅನ್ವಯವಾಗುವುದಿಲ್ಲ.

## ಬಳಕೆ, ಉಪಯುಕ್ತತೆ

ಉದರಿಮಾಪನ ಭಾರತದಲ್ಲಿ ದೃಢವಾದ ವಿಶಾಲ ನೆಲೆಗಟ್ಟನ್ನು ಕಂಡುಕೊಂಡಾಗ ಅನೇಕ ರೀತಿಯಲ್ಲಿ ಅದನ್ನು ಬಳಸಬಹುದು. ವಿನಿಯೋಜಕರಿಗೆ ತಾವು ಹೂಡಿದ ಹಣ ಬಡ್ಡಿಯ ಸಹಿತ ಹಿಂದಕ್ಕೆ ಬರುವುದೇ ಎನ್ನುವ ಸಂದೇಹಕ್ಕೆ ಸ್ವಲ್ಪ ಮಟ್ಟಿಗಾದರೂ ಉದರಿ ಮಾಪನ ಸಮಾಧಾನವನ್ನು ಒದಗಿಸಬಹುದಾಗಿದೆ. ಇದರಿಂದ ವಿನಿಯೋಜನೆಯೊಂದರಿಂದ ಉಂಟಾಗುವ ನಷ್ಟವನ್ನು ನಿಯಂತ್ರಿಸಬಹುದಾಗಿದೆ. ಕಂಪನಿಗಳು/ಘಟಕಗಳು/ಸಂಸ್ಥೆಗಳು ತಮ್ಮ ಋಣ ಸಾಲಪತ್ರಗಳಿಗೆ ಉದರಿ ಮಾಪನವನ್ನು ಪಡೆದುಕೊಂಡಲ್ಲಿ ಹೆಚ್ಚು ಹೆಚ್ಚು ವಿನಿಯೋಜಕರನ್ನು ತಮ್ಮತ್ತ ಆಕರ್ಷಿಸಬಹುದು.

ಉದರಿಮಾಪನ ಸಂಸ್ಥೆಗಳಲ್ಲಿ ಮಾಹಿತಿಯ ಬ್ಯಾಂಕ್ಅನ್ನೇ ರೂಪಿಸಬಹುದು. ಸಾಲಪತ್ರಗಳನ್ನು ಮಾರುವ/ಕೊಳ್ಳುವ ವ್ಯಕ್ತಿಗಳು/ಸಂಸ್ಥೆಗಳು ಉದರಿಮಾಪನ ಸಂಸ್ಥೆಗಳಿಂದ ಸೂಕ್ತ ಮಾಹಿತಿ ಪಡೆದು ತಮ್ಮ ನಿರ್ಣಯಗಳನ್ನು ಕ್ಷಿಪ್ರವಾಗಿ ಕೈಗೊಳ್ಳಬಹುದು.

ಈ ಮಾಹಿತಿ ಬ್ಯಾಂಕು, ಬಂಡವಾಳ ಪೇಟೆಯಲ್ಲಿ ಕಾರ್ಯಪ್ರವೃತ್ತರಾಗಿರುವವರಿಗೂ, ವಿನಿಯೋಜಕರಿಗೂ ಲಭ್ಯವಾಗುವುದ

[ಪುಟ 6ನ್ನು ನೋಡಿ

# ಇಂದಿನ ಅಗತ್ಯ: ಸಂಪೂರ್ಣ ಗಣಕೀಕರಣ

**ಭರತ್, ಬಿ. ಎನ್.**
ಭಾರತೀಯ ಸ್ಟೇಟ್ ಬ್ಯಾಂಕ್, ಕೃಷಿ ಅಭಿವೃದ್ಧಿ ಶಾಖೆ, ಮೂಡಿಗೆರೆ

ಸದಾ ವಿಸ್ತರಿಸುತ್ತ, ವೈವಿಧ್ಯಮಯವಾಗುತ್ತ, ಸಂಕೀರ್ಣವೂ ಆಗುತ್ತಿರುವ ಬ್ಯಾಂಕಿಂಗ್ ಕ್ಷೇತ್ರದ ಸಂಪೂರ್ಣ ಗಣಕೀಕರಣ ಇಂದಿನ ಅಗತ್ಯ. ಇದನ್ನು ಸಾಧಿಸುವಲ್ಲಿ ಎದುರಿಸಬೇಕಾಗುವ ನಾನಾ ಸಮಸ್ಯೆಗಳ ವಿವೇಚನೆ, ಪರಿಹಾರ ಇಲ್ಲಿದೆ.

"ಇಪ್ಪತ್ತೊಂದನೆಯ ಶತಮಾನಕ್ಕೆ ನಾವು ಕಾಲಿಡಬೇಕಾದರೆ ಸಂಪೂರ್ಣ ವೈಜ್ಞಾನಿಕೀಕರಣ, ಕಂಪ್ಯೂಟರೀಕರಣ ಅಗತ್ಯ" ಎಂದು ದಶಕದ ಮೊದಲೇ ಅಂದಿನ ಪ್ರಧಾನಿ ದಿವಂಗತ ರಾಜೀವ ಗಾಂಧಿಯವರು ಕರೆ ನೀಡಿದಾಗ ಇಪ್ಪತ್ತೊಂದನೇ ಶತಮಾನಕ್ಕೆ ದಾಪುಗಾಲು ಹಾಕಲು ಇವರಿಗೇನು ಅಷ್ಟು ಅವಸರ ಎಂದು ಹಾಸ್ಯ ಮಾಡಿದವರೇ ಹೆಚ್ಚು. ಆದರೆ ಇಂದು ಪಕ್ಷ ಬೇಧ ಮರೆತು, ರಾಜಕೀಯದಲ್ಲಿ ಆಸಕ್ತಿ ಇಲ್ಲದವರೂ ಈ ಯೋಚನೆಯನ್ನು ಮೆಚ್ಚಿ, ಅಂತರರಾಷ್ಟ್ರೀಯ ಮಟ್ಟದಲ್ಲಿ ನಮ್ಮ ದೇಶ ಅಭಿವೃದ್ಧಿಹೊಂದಬೇಕಾದರೆ ಆಧುನಿಕ ತಂತ್ರಜ್ಞಾನ, ಗಣಕೀಕರಣ ಇತ್ಯಾದಿ ಅಗತ್ಯ ಎಂದು ಮನಗಾಣುತ್ತಿದ್ದಾರೆ. ಬ್ಯಾಂಕಿಂಗ್ ಕ್ಷೇತ್ರಕ್ಕೂ ಈ ಚಿಂತನೆ ನೂರಕ್ಕೆ ನೂರರಷ್ಟು ಸತ್ಯ.

1969ರಲ್ಲಿ ಮೊದಲ ಬಾರಿಗೆ 14 ವಾಣಿಜ್ಯ ಬ್ಯಾಂಕುಗಳು ರಾಷ್ಟ್ರೀಕರಣಕ್ಕೊಳಗಾದಾಗ ಅಂದಿನ ಪ್ರಧಾನಿ ದಿವಂಗತ ಇಂದಿರಾ ಗಾಂಧಿಯವರು ತಮ್ಮ ರಾಷ್ಟ್ರವ್ಯಾಪಿ ಬಾನುಲಿ ಪ್ರಸಾರದಲ್ಲಿ ತಮ್ಮ ಹೆಜ್ಜೆಯನ್ನು ಸಮರ್ಥಿಸುತ್ತಾ ಅಂದಿದ್ದರು: "ಪ್ರತಿಯೊಬ್ಬನ ನರನಾಡಿಗಳಲ್ಲೂ ಬ್ಯಾಂಕಿಂಗ್ ರಕ್ತ ಹರಿಯುವಂತಾಗಬೇಕು, ಬ್ಯಾಂಕಿಂಗಿನ ಪ್ರಯೋಜನ ಪ್ರತಿಯೊಬ್ಬ ಪ್ರಜೆಗೂ ದೊರಕುವಂತಾಗಬೇಕು." ಆ ಬಳಿಕದ ಎರಡೂವರೆ ದಶಕದಲ್ಲಿ ಹಲವು ರಾಷ್ಟ್ರೀಕೃತ ಬ್ಯಾಂಕುಗಳು, ಖಾಸಗಿ ಬ್ಯಾಂಕುಗಳು ರೈತರಿಗೆ, ಸಣ್ಣ ಉದ್ದಿಮೆದಾರರಿಗೆ ಬೇರೆ ಬೇರೆ ಯೋಜನೆಗಳಲ್ಲಿ ಸಾಲ ನೀಡಿ ರಾಷ್ಟ್ರದ ಆರ್ಥಿಕತೆ ಉತ್ತಮಗೊಳ್ಳುವಲ್ಲಿ, ಸಾಮಾನ್ಯ ಜನರ ಜೀವನ ಮಟ್ಟದಲ್ಲಿ ಪ್ರಗತಿ ಕಂಡುಬರುವಲ್ಲಿ ಸಹಾಯ ಹಸ್ತ ಚಾಚಿವೆ. ದೇಶದ ಪ್ರತಿಯೊಂದು ಮೂಲೆಯನ್ನೂ ತಲುಪಿದ ಬಳಿಕ. ಪ್ರತಿಯೊಬ್ಬ ವ್ಯಕ್ತಿಯನ್ನೂ ಬಡತನದ ರೇಖೆಯಿಂದ ಮೇಲಕ್ಕೆತ್ತುವ ಪ್ರಯತ್ನ ನಡೆಸಿದ ಬಳಿಕ ಈಗ ಅಂತರರಾಷ್ಟ್ರೀಯ ಮಟ್ಟದಲ್ಲಿ ನಮ್ಮ ಬ್ಯಾಂಕುಗಳ ಅಸ್ತಿತ್ವವನ್ನು ಪ್ರಬಲಗೊಳಿಸಬೇಕಾದರೆ, ರಾಷ್ಟ್ರದ ಆರ್ಥಿಕತೆಯಲ್ಲಿ ಹೊಸ ಮಜಲನ್ನು ತಲುಪಬೇಕಾದ ನಮ್ಮ ಪ್ರಾಶಸ್ತ್ಯಗಳೂ ಕಾಲಕ್ಕೆ ತಕ್ಕಂತೆ ಬದಲಾಗುವುದು ಅಗತ್ಯ. ಆ ನಿಟ್ಟಿನಲ್ಲಿ ಯೋಚಿಸುವಾಗ ಸಂಪೂರ್ಣ ಗಣಕೀಕರಣ ಇಂದಿನ ಆದ್ಯ ಗುರಿಯಾಗಿದೆ.

ಪ್ರಧಾನಿ ನರಸಿಂಹರಾಯರ ನೇತೃತ್ವದ ಕೇಂದ್ರ ಸರಕಾರ ಅಧಿಕಾರ ವಹಿಸಿಕೊಂಡಾಗ ನಮ್ಮ ಆರ್ಥಿಕ ಸ್ಥಿತಿ ತೀರಾ ಚಿಂತಾಜನಕವಾಗಿತ್ತು. ವಿದೇಶೀ ಸಾಲದ ಹೊರೆ ಅಧಿಕಗೊಂಡಾಗ ವಿದೇಶಿ ವಿನಿಮಯ ದಾಸ್ತಾನು ಸಾರ್ವಕಾಲಿಕ ಕೆಳಮಟ್ಟಕ್ಕೆ ತಲುಪಿದಾಗ ಹೊಸ ಆರ್ಥಿಕ ಧೋರಣೆ, ಉದಾರೀಕರಣ, ಮುಕ್ತ ಮಾರುಕಟ್ಟೆ ಇತ್ಯಾದಿ ನವಚಿಂತನೆಗಳು ಮೂಡಿಬಂದವು. ಹಣಕಾಸು ಸಚಿವ ಡಾ. ಮನಮೋಹನ ಸಿಂಗರ ಈ ಆರ್ಥಿಕ ಧೋರಣೆಗಳು ಅಂತರರಾಷ್ಟ್ರೀಯ ಆರ್ಥಿಕ ಭೂಪಟದಲ್ಲಿ ಭಾರತದ ಸ್ಥಳವನ್ನೂ ಗುರುತಿಸುವಲ್ಲಿ ಸಹಾಯಕವಾದವು. ಈ ಮುಕ್ತ ಆರ್ಥಿಕ ಸ್ಥಿತಿಯಲ್ಲಿ ಹಲವು ವಿದೇಶೀ ಕಂಪೆನಿಗಳು, ಹಣಕಾಸು ಸಂಸ್ಥೆಗಳು, ವಿದೇಶೀ ಸಹಭಾಗಿತ್ವಗಳು ನಮ್ಮ ನೆಲದಲ್ಲಿ ಕಾಲಿರಿಸಿದಾಗ, ನಮ್ಮ ಕಂಪೆನಿಗಳು, ಸಂಸ್ಥೆಗಳು ಅಂತರರಾಷ್ಟ್ರೀಯ ಮಟ್ಟದಲ್ಲಿ ತಮ್ಮ ರೆಕ್ಕೆಯನ್ನು ಬಿಡಿಸತೊಡಗಿದಾಗ ನಮ್ಮ ಬ್ಯಾಂಕುಗಳೂ ಹೊಸ ಗ್ರಾಹಕರ ಹೊಸ ಬೇಡಿಕೆಗಳನ್ನು ಪೂರೈಸುವ ನಿಟ್ಟಿನಲ್ಲಿ ತ್ವರಿತವಾಗಿ ಚಿಂತಿಸುವುದು ಅಗತ್ಯ. ನಮ್ಮ ಬ್ಯಾಂಕುಗಳ ಸೌಲಭ್ಯ ಇನ್ನೂ ಓಬೀರಾಯನ ಎತ್ತಿನ ಗಾಡಿಯ ರೀತಿಯಲ್ಲೇ ಇದ್ದರೆ ನಮ್ಮ ರಾಷ್ಟ್ರದಲ್ಲಿ ಹೊಸ ಕೈಗಾಕೆಗಳು, ಉದ್ಯಮಗಳು, ಹೊಸ ಬಂಡವಾಳಗಳು ಇತ್ಯಾದಿ ಆರಂಭಿಸುವಲ್ಲಿ ವಿದೇಶೀ ಸಂಸ್ಥೆಗಳಾಗಲಿ, ನಮ್ಮ ದೇಶದ ಕಂಪೆನಿಗಳೇ ಆಗಲಿ ಹಿಂದೇಟು ಹಾಕುವುದು ಖಂಡಿತ. ನಿಮಿಷ ಮಾತ್ರದಲ್ಲಿ ಒಂದು ಶಾಖೆಯಿಂದ ಇನ್ನೊಂದು ಶಾಖೆಗೆ ಹಣ ವರ್ಗಾಯಿಸಲು ಫ್ಯಾಕ್ಸ್, ಮೋಡೆಮ್ ಇತ್ಯಾದಿ ಇಂದಿನ ಆಧುನಿಕ ಯುಗದಲ್ಲಿ ಅತ್ಯಗತ್ಯ. ಇಂದಿನ ಎಲೆಕ್ಟ್ರಾನಿಕ್ ಯುಗದಲ್ಲಿ ತ್ವರಿತ ನಿರ್ಧಾರಗಳನ್ನು ತೆಗೆದುಕೊಳ್ಳಬೇಕಾದ ಸಂದರ್ಭದಲ್ಲಿ ನಮ್ಮ ಪ್ರತಿಷ್ಠಿತ ದೊಡ್ಡ ಗ್ರಾಹಕರು ಕ್ಷಿಪ್ರ ಸೇವೆಯನ್ನು ಬಯಸುತ್ತಿರುತ್ತಾರೆ. ಈ ಕ್ಷಿಪ್ರಗತಿಯ ಸೇವೆ ನೀಡುವಲ್ಲಿ ಗಣಕಯಂತ್ರಗಳು ಅನಿವಾರ್ಯ. ಸಮಯಕ್ಕೆ ಸರಿಯಾಗಿ ಲಭಿಸುವ ಖಾತಾತಃಖ್ತೆಗಳು ತಮ್ಮ ವಹಿವಾಟುಗಳನ್ನು ಹೊಂದಾಣಿಕೆ ಮಾಡುವಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ಪಾಸು ಪುಸ್ತಕದಲ್ಲಿ ಏನೋ ಗೀಚಿದ್ದರೆ ಅದನ್ನು ಅರ್ಥೈಸಲು,

ಬಿಟ್ಟುಹೋಗಿರುವ ವಹಿವಾಟಿನ ಬಗ್ಗೆ ಸಂಶಯ ನಿವಾರಿಸಲು ಉಂಟಾಗುವ ಸಮಯಹರಣ ಈ ಗಣಕ ಯಂತ್ರಗಳ ಖಾತಾತಃಖ್ತೆಗಳಿಂದಾಗಿ ಇಲ್ಲದಂತಾಗುವುದು. ದೈನಂದಿನ ಬೇರೆ ವ್ಯವಹಾರಗಳ ಜೊತೆಗೇ ಗಣಕಯಂತ್ರಗಳಿಂದ ಮೂಡಿಬರುವ ಈ ಖಾತಾತಃಖ್ತೆಗಳಿಂದಾಗಿ ಹೆಚ್ಚಿನ ಸಮಯವೂ ನಷ್ಟವಾಗುವುದಿಲ್ಲ ಅಚ್ಚುಕಟ್ಟಾದ ಸುಂದರ ಅಕ್ಷರಗಳಿಂದ ಕೂಡಿರುವ ಈ ವಿವರಗಳು ಗ್ರಾಹಕರನ್ನು ಸಂತುಷ್ಟಿಗೊಳಿಸುವವು.

### ಸಂಪೂರ್ಣ ಗಣಕೀಕರಣ

ಸಂಪೂರ್ಣ ಗಣಕೀಕರಣಗೊಂಡಾಗ ಗ್ರಾಹಕ ತನ್ನ ಶಾಖೆಗೆ ಹೋದಾಗ ಯಾವುದೇ ಒಂದು ಟರ್ಮಿನಲ್‌ನಲ್ಲಿ ತನ್ನ ಖಾತೆಯ ವಿವರಗಳನ್ನು ಗಣಕಯಂತ್ರದ ಪರದೆಯಲ್ಲಿ ವೀಕ್ಷಿಸಬಹುದು, ಆದಕ್ಕಾಗಿ ಯಾವುದೇ ನಿರ್ದಿಷ್ಟ ಕೌಂಟರಿಗೆ ಹೋಗಿ ಕಾಯಬೇಕಾದ ಅಗತ್ಯವಿರುವುದಿಲ್ಲ. ಬಸ್ ನಿಲ್ದಾಣಗಳಲ್ಲಿ, ರೈಲ್ವೇ ಮುಂಗಡ ಸೀಟು ಕಾದಿರಿಸುವ ಸ್ಥಳಗಳಲ್ಲಿ ಇಂತಹ ವ್ಯವಸ್ಥೆ ಯಶಸ್ವಿಯಾಗಿರುವುದನ್ನು ನಾವು ಈಗಾಗಲೇ ಕಂಡುಕೊಂಡಿದ್ದೇವೆ. ಶಾಖೆಗಳಲ್ಲಿ ಕೆಲಸದ ಒತ್ತಡ ಕಡಿಮೆಯಾಗಿ ಗ್ರಾಹಕರು ತಮ್ಮ ಕೆಲಸಗಳನ್ನು ತ್ವರಿತವಾಗಿ ಮುಗಿಸಲು ಇದು ಸಹಕಾರಿಯಾಗುವುದು.

### ದಶಕ ಬ್ಯಾಂಕಿಂಗ್ ವಹಿವಾಟುಗಳು

ಹೊಸ ಹೊಸ ಉದ್ಯಮಗಳು, ಕೈಗಾರಿಕೆಗಳು ತಮ್ಮ ಯೋಜನೆಗಳಿಗಾಗಿ ಬಂಡವಾಳ ಮಾರುಕಟ್ಟೆ ಪ್ರವೇಶಿಸುವುದು ಇತ್ತೀಚೆಗೆ ಸರ್ವೇಸಾಮಾನ್ಯವಾಗಿದೆ. ಈ ಬಂಡವಾಳ ಮಾರುಕಟ್ಟೆಯ ಬೆಳವಣಿಗೆಯಿಂದಾಗಿ ಹೂಡಿಕೆದಾರರು ಲಾಭಗಳಿಸುವಂತಾಗಿದೆ. ಹೊಸ ಹೊಸ ಶೇರುಗಳು ಮಾರುಕಟ್ಟೆಗೆ ಬಂದಾಗ, ರೈಟ್ಸ್ ಇಶ್ಯೂಗಳು ಬಿಡುಗಡೆಯಾದಾಗ ಈ ಅರ್ಜಿ ಪತ್ರಗಳನ್ನು ವಿಲೇವಾರಿಮಾಡಲು, ಸಂಬಂಧಿಸಿದ ಕಂಪೆನಿಗಳಿಗೆ ಸೂಚನೆ ನೀಡಲು, ಮರುಪಾವತಿ ಆದೇಶ, ಲಾಭಾಂಶ ಅಧಿಪತ್ರ, ಇತ್ಯಾದಿಗಳನ್ನು ವ್ಯವಸ್ಥಿತ ರೀತಿಯಲ್ಲಿ ವಿಲೇವಾರಿ ಮಾಡಲು ಗಣಕಯಂತ್ರಗಳು ಅತ್ಯಗತ್ಯ. ವಿದೇಶೀ ಸಾಂಸ್ಥಿಕ ಹೂಡಿಕೆದಾರರು ಭಾರತದಂತಹ ಅಭಿವೃದ್ಧಿಪರ ದೇಶಗಳಲ್ಲಿ ತಮ್ಮ ಹೂಡಿಕೆಗಳನ್ನು ಹೆಚ್ಚಿಸುವ ಈ ಸಂದರ್ಭದಲ್ಲಿ ಗಣಕಯಂತ್ರಗಳು ನಮ್ಮ ಬ್ಯಾಂಕುಗಳ ಪ್ರತಿಷ್ಠೆಯನ್ನು ಇಮ್ಮಡಿಗೊಳಿಸುವವು.

### ಸ್ವತಸ್ಸಲೀ ಸರಾಫ್ ಯಂತ್ರಗಳು

ವಿದೇಶೀ ಬ್ಯಾಂಕುಗಳು ನಮ್ಮಲ್ಲಿ ಆರಂಭಿಸಿದಂತೆ ನಮ್ಮ ಬ್ಯಾಂಕುಗಳು ಈ ರೀತಿಯ ಸ್ವತಸ್ಸಲೀ ಯಂತ್ರಗಳನ್ನು ಈಗಾಗಲೇ ಕೆಲವು ಕಡೆ ಆರಂಭಿಸಿವೆ. ವ್ಯವಹಾರದ ಸಮಯದಲ್ಲಿ ಅಷ್ಟೇ ಅಲ್ಲದೆ ದಿನದ ಇಪ್ಪತ್ತನಾಲ್ಕು ಗಂಟೆಯೂ ಈ ಯಂತ್ರದಲ್ಲಿ ಗುಂಡಿಗಳನ್ನು ಒದುಮಿ ಹಣ ಪಡೆಯುವ ಅವಕಾಶವಿದೆ. ಇಂತಹ ಆಧುನಿಕ ವ್ಯವಸ್ಥೆಗಳಿಂದಾಗಿ ದೊಡ್ಡ ಪ್ರತಿಷ್ಠಿತ ಗ್ರಾಹಕರೂ ನಮ್ಮ ಬ್ಯಾಂಕುಗಳಲ್ಲೇ ವ್ಯವಹರಿಸುವ ಇರಾದೆ ವ್ಯಕ್ತಪಡಿಸುವರು. ವಿದೇಶೀ ಬ್ಯಾಂಕುಗಳಿಂದ, ಬೇರೆ ಹಣಕಾಸು ಸಂಸ್ಥೆಗಳಿಂದ ಬರುವ ಸ್ಪರ್ಧೆಯನ್ನು ಎದುರಿಸಲು ಇಂತಹ ಯಂತ್ರಗಳು ಸುಸಜ್ಜಿತವಾಗಿವೆ.

ಗಣಕೀಕರಣದ ಬಳಿಕ ದಿನವಹಿ ಪುಸ್ತಕ ಹಾಗೂ ದೈನಂದಿನ ವ್ಯವಹಾರದ ಇತರ ಪುಸ್ತಕಗಳೂ ಅದೇ ದಿನ ಬರೆಯಲ್ಪಟ್ಟು ಶಾಖೆಗಳ ಕೆಲಸಗಳು ಅಚ್ಚುಕಟ್ಟಾಗಿ, ಕ್ಷಿಪ್ರಗತಿಯಲ್ಲಿ ಮುಗಿಯುವವು. ಅದೇ ದಿನ ಎಲ್ಲಾ ಲೆಕ್ಕಗಳು ಸಮತೋಲಗೊಳ್ಳುವುದರಿಂದಾಗಿ ಬರೀ ಬ್ಯಾಂಕುಗಳ ಲೆಕ್ಕಾಚಾರದಲ್ಲಿ, ವ್ಯವಹಾರದಲ್ಲಿ ಅಚ್ಚುಕಟ್ಟು ಮಾತ್ರವಲ್ಲ ಗ್ರಾಹಕರಿಗೂ ತಮ್ಮ ಖಾತೆಗಳನ್ನು ಹೊಂದಿಸುವುದರಲ್ಲಿ ಸಹಕಾರಿಯಾಗುವುದು. ಬೇರೆಬೇರೆ ಸ್ಥಳಗಳಿಗೆ ಹಣದ ರವಾನೆ, ಚೆಕ್ಕು ವಸೂಲಿ ಇತ್ಯಾದಿಗಳನ್ನು ಬೇಗನೆ ಸಾಧಿಸಲು, ನೆನಪೋಲೆಗಳನ್ನು ಕಳುಹಿಸಲು ಈ ಗಣಕಗಳು ಪೂರಕವಾಗಿ ಕೆಲಸ ಮಾಡುವವು. ಅಷ್ಟೇ ಅಲ್ಲ. ಬ್ಯಾಂಕುಗಳಿಗೆ ತಮ್ಮ ತಮ್ಮ ಪ್ರಧಾನ ಕಛೇರಿಗಳಿಗೆ, ಭಾರತೀಯ ರಿಸರ್ವ್ ಬ್ಯಾಂಕಿಗೆ ಕಳುಹಿಸಬೇಕಾದ ಅನೇಕ ಸಾಪ್ತಾಹಿಕ, ಮಾಸಿಕ, ತ್ರೈಮಾಸಿಕ, ವಾರ್ಷಿಕ ವಿವರಣೆಗಳು ಸಂಪೂರ್ಣ ಗಣಕೀಕರಣದ ಬಳಿಕ ಸರಳಗೊಳ್ಳುವವು. ಬ್ಯಾಂಕುಗಳಲ್ಲಿ ನಡೆಯುವ ಒಟ್ಟಾರೆ ವ್ಯವಹಾರಗಳು, ಪಡೆದುಕೊಂಡ ಠೇವಣಿಗಳು, ನೀಡಿದ ಸಾಲಗಳು, ಆದ್ಯತಾರಂಗದ ಸಾಲಗಳು, ಇತ್ಯಾದಿ ವ್ಯವಹಾರಗಳ ವಿವರಗಳು ಕೇಂದ್ರ ಸರಕಾರಕ್ಕೂ ಬೇಕಾಗುವುದು. ಈ ವಿವರಣೆಗಳ ಆಧಾರದಲ್ಲಿ ಲೋಕಸಭೆಯಲ್ಲಿ ಪ್ರಸ್ತಾವಗಳೂ ನಡೆಯುತ್ತವೆ. ಕ್ಷಿಪ್ರಗತಿಯಲ್ಲಿ, ಅಚ್ಚುಕಟ್ಟಾಗಿ, ತಪ್ಪಿಲ್ಲದೆ ದೊರಕುವ ಈ ಮಾಹಿತಿಗಳಿಂದ ಸರಕಾರಕ್ಕೆ ಹೊಸ ಹೊಸ ಯೋಜನೆಗಳನ್ನು ಅನುಷ್ಠಾನಕ್ಕೆ ತರಲು, ಹಳೆಯ ಯೋಜನೆಗಳ ಬಗ್ಗೆ ಕೂಲಂಕಷ ಪರೀಕ್ಷೆ ಮಾಡಲು, ವಿದೇಶೀ ವಿನಿಮಯದ ಬಗ್ಗೆ, ಆರ್ಥಿಕತೆಯ ಬಗ್ಗೆ, ಆರ್ಥಿಕ ಪ್ರಗತಿಯ ಬಗ್ಗೆ ವಿಮರ್ಶಿಸಲು, ಹೊಸ ಹೆಜ್ಜೆ ಇಡಲು ಇಂತಹ ಗಣಕ ಯಂತ್ರಗಳು ಸಹಕರಿಸುವವು. ಬ್ಯಾಂಕುಗಳು ಯಾವುದೇ ಆರ್ಥಿಕತೆಯ ಬೆನ್ನೆಲುಬಾಗಿರುವುದರಿಂದ ಇಂತಹ ಆಧುನಿಕ ವ್ಯವಸ್ಥೆಗಳು ವ್ಯವಹಾರದ ಪ್ರಗತಿಗೆ ಪೂರಕವಾಗಿ ಕೆಲಸ ಮಾಡುವವು.

ಬೇರೆ ಬೇರೆ ಉದ್ಯಮಗಳಿಗೆ ಸಾಲ ನೀಡುವಾಗ ಅವುಗಳ ಲೆಕ್ಕಗಳನ್ನೂ, ಬೇರೆ ಬೇರೆ ಅನುಪಾತಗಳನ್ನೂ ಪರಿಶೀಲಿಸಲು ಗಣಕ ಯಂತ್ರಗಳು ಸಹಕರಿಸುವವು. ಉದ್ಯಮಗಳಿಗೆ ಅಗತ್ಯ ಬೇಕಾದ ಸಾಲವನ್ನು ನಿರ್ಣಯಿಸುವಲ್ಲಿ, ಸಮಯಕ್ಕೆ ಸರಿಯಾಗಿ ಹಣವನ್ನು ಒದಗಿಸುವುದರಲ್ಲಿ ಗಣಕಯಂತ್ರಗಳ ಪಾತ್ರ ದೊಡ್ಡದು. ಅಂತರರಾಷ್ಟ್ರೀಯ ಬ್ಯಾಂಕಿಂಗ್‌ನಲ್ಲೂ ಈ ಗಣಕಯಂತ್ರಗಳು ಸಹಕಾರಿಯಾಗುವವು.

### ಯೋಜನೆ, ವ್ಯವಹಾರದ ಗುರಿ, ವ್ಯವಹಾರಕುಶಲತೆ

ಯಾವುದೇ ಒಂದು ಕ್ಷೇತ್ರದಲ್ಲಿ ಯಶಸ್ವಿಯಾಗಲು ಸರಿಯಾದ ರೀತಿಯ ಯೋಜನೆ ಅತ್ಯಗತ್ಯ. ಬ್ಯಾಂಕಿಂಗ್ ಕ್ಷೇತ್ರದಲ್ಲೂ ಈ ಮಾತು ದಿಟ. ಹೊಸ ಹೊಸ ಬ್ಯಾಂಕುಗಳು ಸಂಪೂರ್ಣ ಗಣಕೀಕರಣದೊಂದಿಗೆ ಸ್ಥಾಪಿಸಲ್ಪಡುವುದರಿಂದ, ವಿದೇಶೀ ಬ್ಯಾಂಕುಗಳು ಈಗಾಗಲೇ ತಮ್ಮ ಛಾಪನ್ನು ಪ್ರದರ್ಶಿಸಿರುವುದರಿಂದ ಹೊಸ ಗ್ರಾಹಕರನ್ನು ಸೆಳೆಯುವಲ್ಲಿ, ಹೊಸಹೊಸ ಕ್ಷೇತ್ರವನ್ನು ಬ್ಯಾಂಕಿಂಗ್ ವ್ಯಾಪ್ತಿಗೆ ತರುವಲ್ಲಿ ಈ ರೀತಿಯ ಆಲೋಚನೆಗಳು ಸಹಕಾರಿಯಾಗುವವು. ಇಂತಹ ಆಲೋಚನೆಗಳಿಗಾಗಿ ಹೊಸಹೊಸ ಮಾಹಿತಿ ಬೇಕಾದಲ್ಲಿ ಗಣಕಯಂತ್ರಗಳನ್ನು ಸಂಪರ್ಕಿಸುವುದು ಬಹು ಸುಲಭ.

### ಔದ್ಯಮಿಕ ಅಶಾಂತಿ

ಬಲಾಢ್ಯವಾಗಿರುವ ಬ್ಯಾಂಕಿಂಗ್ ನೌಕರ ವರ್ಗದ ಸಂಘ ಹಾಗೂ ಅಧಿಕಾರಿಗಳ ಸಂಘಟನೆಗಳು ಆಗಾಗ ಕ್ಷುಲ್ಲಕ ಕಾರಣಗಳಿಗೂ ಚಳವಳಿಗೆ ಕರೆ ನೀಡಿ ದೇಶದ ಆರ್ಥಿಕತೆಯ ನರನಾಡಿಯಂತಿರುವ ಬ್ಯಾಂಕಿಂಗ್ ಕ್ಷೇತ್ರದಲ್ಲಿ ತಳಮಳ ಉಂಟುಮಾಡುವವು. ಹಣಕಾಸಿನ ವ್ಯವಹಾರದಲ್ಲಿ ಅಡಚಣೆ ಉಂಟಾದಾಗ ಆರ್ಥಿಕರಂಗದಲ್ಲಿ, ಔದ್ಯಮಿಕರಂಗದಲ್ಲಿ, ಹಚ್ಚೇಕೆ, ಜನಸಾಮಾನ್ಯರ ದೈನಂದಿನ ಕೆಲಸ ಕಾರ್ಯಗಳಲ್ಲೂ ತೊಂದರೆಯುಂಟಾಗುವುದು. ಕೆಲವೊಮ್ಮೆ ಆಡಳಿತ ವರ್ಗದವರ ತಪ್ಪು ಧೋರಣೆಗಳೂ ಈ ರೀತಿಯ ಚಳವಳಿಗೆ, ಅಶಾಂತಿಗೆ ಕಾರಣವಿರಬಹುದಾದರೂ ಬ್ಯಾಂಕೇ ಮುಚ್ಚುವುದೆಂದರೆ ನಾವು ಆರ್ಥಿಕ ಪ್ರಗತಿಯಲ್ಲಿ ಒಂದೊಂದೇ ಹೆಜ್ಜೆ ಹಿಮ್ಮೆಟ್ಟಿದಂತಾಗುವುದು. ಇಂತಹ ಸಂದರ್ಭಗಳಲ್ಲಿ ಕೆಲಸಗಾರರ ಹೊರತಾಗಿಯೂ ಈ ಗಣಕಯಂತ್ರಗಳು ತತ್ಪರತೆಯಿಂದ ಕಾರ್ಯ ನಿರ್ವಹಿಸುವ ಕಾರಣ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಹಣಕಾಸಿನ ವ್ಯವಹಾರಗಳು ಹೆಚ್ಚೇನೂ ಅಡಚಣೆಯಿಲ್ಲದೆ ಮುಂದುವರಿಯುವವು. ಹೆಚ್ಚುವರಿ ಮಾನವಶಕ್ತಿಯ ಪರ್ಯಾಯ ಬಳಕೆ ಸಂಪೂರ್ಣ ಗಣಕೀಕರಣಗೊಂಡಾಗ ಸ್ವಾಭಾವಿಕವಾಗಿಯೇ ಈಗಿರುವ ನೌಕರರಿಗೆ ಹೆಚ್ಚಿನ ಕೆಲಸ ಇರದು. ಅವರ ಬಿಡುವಿನ ವೇಳೆಯನ್ನು ಆಯಾ ಬ್ಯಾಂಕುಗಳು ಸದುಪಯೋಗಪಡಿಸಿಕೊಳ್ಳಬಹುದು. ಹೊಸ ವ್ಯವಹಾರವನ್ನು ಆಕರ್ಷಿಸುವುದರಲ್ಲಿ ಅಥವಾ ಠೇವಣಿ ಸಂಗ್ರಹ ಮಾಡುವುದರಲ್ಲಿ ಅಥವಾ ಸಾಲ ವಸೂಲಿ ಮಾಡುವುದರಲ್ಲಿ ಅಥವಾ ಜನಸಾಮಾನ್ಯರಿಗೆ ಬ್ಯಾಂಕ್ ಸೌಲಭ್ಯಗಳ ಬಗ್ಗೆ ತಿಳಿಹೇಳುವುದರಲ್ಲಿ ಉಪಯೋಗಿಸಬಹುದು. ಕಂಪ್ಯೂಟರ್‌ಗಳ ಬಳಕೆಯಿಂದ ಉಳಿತಾಯವಾಗುವ ಈ ಸಮಯವನ್ನು ಬ್ಯಾಂಕಿಗೆ ಅನುಕೂಲವಾಗುವಂತೆ ಉತ್ಪಾದಕತೆಯಲ್ಲಿ ಉಪಯೋಗಿಸಿಕೊಳ್ಳಬಹುದು.

ಉಪಗ್ರಹದ ಮೂಲಕ ಸಂಪರ್ಕವನ್ನು ಕೆಲವೇ ಸೆಕೆಂಡುಗಳಲ್ಲಿ ಪಡೆಯುವ ಅವಕಾಶವಿರುವ ಈ ವೈಜ್ಞಾನಿಕಯುಗದಲ್ಲಿ, ದೇಶೀಯ ಹಾಗೂ ವಿದೇಶೀ ಗ್ರಾಹಕರು ತ್ವರಿತ ಸೇವೆಯನ್ನು ನಿರೀಕ್ಷಿಸುವ ಈ ಸಂದರ್ಭದಲ್ಲಿ ವಿದೇಶೀ ಬ್ಯಾಂಕುಗಳ ಸ್ಪರ್ಧೆಯನ್ನು ಎದುರಿಸಲು ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ನಮ್ಮ ಬ್ಯಾಂಕುಗಳೂ ಹೆಸರು ಗಳಿಸಲು ಸಂಪೂರ್ಣ ಗಣಕೀಕರಣ ಇಂದಿನ ಅಗತ್ಯವಾಗಿದೆ. ●

---

## ಉದರಿ ಮಾಪನ

3ನೇ ಪುಟದಿಂದ ಮುಂದುವರಿದುದು]

ರಿಂದ ಬಂಡವಾಳ ಪೇಟೆ ಮತ್ತಷ್ಟು ಬೆಳೆಯಲು ಕಾರಣವಾಗುತ್ತದೆ. ಸೆಬಿ ಮುಂತಾದ ಸಂಸ್ಥೆಗಳು, ಕಂಪನಿಯೊಂದು ಹೊಸ ಸಂಲೇಖಗಳನ್ನು ಮಾರುಕಟ್ಟೆಗೆ ಬಿಡುಗಡೆ ಮಾಡಬೇಕಾದರೆ ಅದು ಉದರಿ ಮಾಪನದ ಕನಿಷ್ಠ ದರ್ಜೆಯನ್ನು ಹೊಂದಿರಲೇಬೇಕೆಂದು ಸೂಚಿಸಿ ವಿನಿಯೋಜಕರ ಹಿತವನ್ನು ಕಾಯಬಹುದು. ವಿದೇಶಿ ಸಹಭಾಗಿತ್ವ ಬಯಸುವ ಕಂಪನಿ/ಸಂಸ್ಥೆ, ಹಾಗೂ ವಿಲೀನೀಕರಣ, ವಶಾವಣೆಗಳ ಸಂದರ್ಭಗಳಲ್ಲಿ ಉದರಿಮಾಪನ ಪ್ರಮುಖ ಪಾತ್ರವನ್ನು ವಹಿಸುತ್ತದೆಂಬುದರಲ್ಲಿ ಸಂದೇಹವಿಲ್ಲ. ಹೀಗೆ ತನ್ನೆಲ್ಲ ಮಿತಿಗಳೊಳಗೆ ಉದರಿ ಮಾಪನ ವ್ಯವಸ್ಥೆ ವೈಯುಕ್ತಿಕ ವಿನಿಯೋಜಕ, ಬಂಡವಾಳ ಪೇಟೆ, ಹಾಗೂ ವಿದೇಶಿ ಬಂಡವಾಳವನ್ನು ಆಕರ್ಷಿಸುವವರೆಗೆ ತನ್ನ ವ್ಯಾಪ್ತಿಯನ್ನು ಬಳಸಿಕೊಂಡು ಒಂದು ಉತ್ತಮ ನಿರ್ಣಾಯಕ ಸಾಧನವಾಗಿ ರೂಪುಗೊಂಡಿದೆ. ಇದರ ಬೆಳವಣಿಗೆಯತ್ತ ನಮ್ಮೆಲ್ಲರ ಕೌತುಕದ ದೃಷ್ಟಿ ಸದ್ಯದಲ್ಲೇನೂ ಕೀಳಬೇಕಾಗಿಲ್ಲ. ●

---

# ಬ್ಯಾಂಕುಗಳಲ್ಲಿ ವಂಚನೆ

**ಎಂ. ಆರ್. ರಘುನಾಥ್**
ಮೈಸೂರು ಬ್ಯಾಂಕ್, ಪ್ರಧಾನ ಕಛೇರಿ, ಬೆಂಗಳೂರು

ಬ್ಯಾಂಕುಗಳಲ್ಲಿ ವಂಚನೆಗಳು ಹೆಚ್ಚುತ್ತಿವೆ. ಈ ಬಗ್ಗೆ ಸುದ್ದಿಗಳು ಪ್ರಕಟವಾಗುತ್ತಲೇ ಇವೆ. ವಂಚನೆ ಎಂದರೇನು? ಇದರ ನಾನಾ ಬಗೆಗಳೇನು? ಇದನ್ನು ತಡೆಗಟ್ಟಲು ಏನೇನು ಕ್ರಮ ಕೈಗೊಳ್ಳಲಾಗುತ್ತಿದೆ? ಇದೆಲ್ಲಾ ಎಷ್ಟು ಯಶಸ್ವಿ?

ಬ್ಯಾಂಕುಗಳಲ್ಲಿ ವಂಚನೆಯ ಪ್ರಕರಣಗಳ ಬಗ್ಗೆ ಆಗಾಗ್ಗೆ ವೃತ್ತ ಪತ್ರಿಕೆಗಳಲ್ಲಿ ಸುದ್ದಿಗಳು ಬರುತ್ತಲೇ ಇರುತ್ತವೆ. ಈಚೀಚೆಗೆ ಇಂತಹ ಪ್ರಕರಣಗಳು ಹೆಚ್ಚಾಗಿ ಸಾರ್ವಜನಿಕರ ಧೃತಿಗೆಡಿಸುತ್ತಿವೆ. ಇಂತಹ ಸುದ್ದಿಗಳನ್ನು ಓದಿದಾಗ ಆಶ್ಚರ್ಯವಾಗಿ ಮೂಗಿನ ಮೇಲೆ ಬೆರಳಿಟ್ಟುಕೊಳ್ಳುವಂತಾಗುತ್ತದೆ. ವಂಚನೆಯನ್ನು ಅಷ್ಟು ಚತುರತೆ ಯಿಂದ ಮಾಡಲಾಗಿರುತ್ತದೆ. ಈಚೆಗೆ ಸಂಭವಿಸಿದ 'ಷೇರು ಹಗರಣ' ಬೃಹತ್ ವಂಚನೆಯ ಪ್ರಕರಣದ ಒಂದು ನಿದರ್ಶನ.

**ವಂಚನೆ ಎಂದರೇನು?**

ವಂಚನೆ ಎಂದರೆ ವಂಚಿಸುವುದು, ಮೋಸ ಮಾಡುವುದು. ಇದು ಕಪಟ, ಕೃತಿಮ. ಆದರೆ ವಂಚನೆ ಎಂಬ ಪದಕ್ಕೆ ಯಾವ ನಿಷ್ಕೃಷ್ಟಾರ್ಥವೂ ಇಲ್ಲ. "ಭಾರತೀಯ ದಂಡ ಸಂಹಿತೆ"ಯಲ್ಲಿ ನಿರೂಪಿಸಿರುವಂತೆ "ವಂಚನೆ" ಎಂದರೆ "ಒಬ್ಬ ವ್ಯಕ್ತಿ ತನ್ನ ಅಪ್ರಾಮಾಣಿಕತೆಯಿಂದ ಇನ್ನೊಬ್ಬ ವ್ಯಕ್ತಿಯ ವಿರುದ್ಧ ಲಾಭ ಗಳಿಸಲು ತೋರುವ ವರ್ತನೆ ಅಥವಾ ಮಾಡುವ ಮೋಸ" ಎಂದು ಹೇಳಬಹುದಾಗಿದೆ. ಅಂದರೆ, ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯನ್ನು ಮೋಸಗೊಳಿಸಿ ತಾನು ಅದರಿಂದ ಲಾಭ ಪಡೆಯುವ ಉದ್ದೇಶದಿಂದ ಮಾಡಿದ ಕೆಲಸ ಎಂದು ಹೇಳಬಹುದು. ಇಂಥ ವಂಚನೆ ಪ್ರಕರಣಗಳನ್ನು ಅನೇಕರು ತಮ್ಮ ದೈನಂದಿನ ಜೀವನ ದಲ್ಲೂ ಎದುರಿಸಬಹುದು. ಆದರೆ ಈಗ ನಮ್ಮ ಮುಂದಿರುವ ವಿಷಯ ಬ್ಯಾಂಕಿನಲ್ಲಿ ವಂಚನೆಯಾದ್ದರಿಂದ ಇತರೆ ವಿಷಯಗಳು ಇಲ್ಲಿ ಅಪ್ರಸ್ತುತ. ಬ್ಯಾಂಕುಗಳ ವ್ಯವಹಾರ ವಹಿವಾಟುಗಳು ಹೆಚ್ಚುತ್ತಿದ್ದಂತೆ ಇಂಥ ವಂಚನೆಯ ಪ್ರಕರಣಗಳು ಹೆಚ್ಚು ಹೆಚ್ಚಾಗಿ ಆಗುತ್ತಿರುವುದು ಕಂಡುಬರುತ್ತಿದೆ. ಬ್ಯಾಂಕಿನಲ್ಲಿ ನಡೆಯುವ ವಂಚ ನೆಯ ಪ್ರಕರಣಗಳನ್ನು ವಿಶ್ಲೇಷಿಸಿದಾಗ ಕಂಡುಬರುವುದೇನೆಂದರೆ, ಸಾಮಾನ್ಯವಾಗಿ ಎಷ್ಟೇ ಜಾಗರೂಕರಾಗಿದ್ದರೂ ಬ್ಯಾಂಕಿನ ಸಿಬ್ಬಂ ದಿಯ ಒಂದು ಸಣ್ಣ ಅಜಾಗರೂಕತೆಯಿಂದಾಗಿ ಇಂತಹ ವಂಚನೆ ಪ್ರಕರಣಗಳು ನಡೆಯಲು ಅವಕಾಶವಾಗುತ್ತದೆ. ಬ್ಯಾಂಕಿನಲ್ಲಿ ವಿಧಿಸಿರುವ ನೀತಿನಿಯಮಗಳನ್ನು, ಕಟ್ಟುಪಾಡುಗಳನ್ನು ಸಮರ್ಪಕವಾದ ರೀತಿಯಲ್ಲಿ ಅನುಸರಿಸಿದರೆ ಇಂತಹ ಎಷ್ಟೋ ವಂಚನೆಯ ಪ್ರಕರಣಗಳನ್ನು ತಡೆಯಬಹುದಾಗಿರುತ್ತದೆ. ಬ್ಯಾಂಕು ಗಳಲ್ಲಿ ಈಗ ವಿಧಿಸಿರುವ ನೀತಿನಿಯಮಗಳು, ಕಟ್ಟುಪಾಡುಗಳು ಸಾಕಷ್ಟು ಇವೆ ಎಂದೆನಿಸುತ್ತದೆ. ಆದರೆ ಬ್ಯಾಂಕುಗಳ ಕೆಲವು ವ್ಯವಸ್ಥಾಪಕರ ಅನಿಸಿಕೆಯಂತೆ ಬ್ಯಾಂಕುಗಳಲ್ಲಿ ಅಧಿಕವಾಗುತ್ತಿರುವ ವ್ಯವಹಾರ ವಹಿವಾಟುಗಳಿಗೆ ಹೋಲಿಸಿದರೆ ಬ್ಯಾಂಕುಗಳಿಗೆ ಒದಗಿಸಿರುವ ಸಿಬ್ಬಂದಿ ಮತ್ತು ಅಧಿಕಾರ ವರ್ಗದ ಸಂಖ್ಯೆ ಅತಿ ಕಡಿಮೆ. ಇದರಿಂದಾಗಿ ವಿಧಿಸಿರುವ ಕಟ್ಟುಪಾಡುಗಳನ್ನು ಎಲ್ಲಾ ರೀತಿಯಲ್ಲಿಯೂ ಅನುಸರಿಸಲು ಸಾಧ್ಯವಾಗದಿರಬಹುದು. ಹೀಗಾಗಿ ಹೆಚ್ಚು ಕಡಿಮೆ ಒಂದಲ್ಲ ಒಂದುಕಡೆ ದಿನಕ್ಕೊಂದರಂತೆ ವಂಚನೆ ಪ್ರಕರಣಗಳು ನಡೆಯುವ ಸಂಭವವಿದೆ. ಅಲ್ಲದೆ ಇಂತಹ ಪ್ರಕರಣ ಗಳು ಪದೇ ಪದೇ ಸಂಭವಿಸಿದಾಗ ಸಾರ್ವಜನಿಕರ ಮನಸ್ಸಿನಲ್ಲಿ ಬ್ಯಾಂಕಿಂಗ್ ಉದ್ಯಮದ ಮೇಲೆಯೇ ಅಪನಂಬಿಕೆ ಬರುವಂತಹ ಸಂದರ್ಭವೂ ಒದಗಬಹುದು. ಈ ವಾದವನ್ನು ಸಲೀಸಾಗಿ ಅಲ್ಲ ಗಳೆಯಲಾಗುವುದಿಲ್ಲ. ಏಕೆಂದರೆ ಈಚಿನ ದಿನಗಳಲ್ಲಿ ಬ್ಯಾಂಕಿಂಗ್ ಉದ್ಯಮದ ವ್ಯವಹಾರ ವಹಿವಾಟುಗಳು ಬೃಹತ್ ಪ್ರಮಾಣದಲ್ಲಿ ಬೆಳೆಯುತ್ತಿರುವುದು ಕಂಡುಬರುತ್ತಿದೆ. ಅದೂ ಅಲ್ಲದೆ ಬ್ಯಾಂಕ್ ರಾಷ್ಟ್ರೀಕರಣವಾದ ಮೇಲಂತೂ ಅದು ಕೇವಲ "ಸೀಮಿತವರ್ಗದ ಬ್ಯಾಂಕು" ಆಗಿರದೆ "ಬಹುಜನರ ಬ್ಯಾಂಕಾಗಿದೆ." ಅದು ಠೇವಣಿ ಸಂಗ್ರಹಣೆಯಲ್ಲಿರಬಹುದು, ಮುಂಗಡ ಸಾಲ ನೀಡುವಿಕೆಯಲ್ಲಿರ ಬಹುದು ಅಥವಾ ಇತರೆ ವ್ಯವಹಾರಗಳಲ್ಲಿರಬಹುದು. ಎಲ್ಲಕ್ಕಿಂತ ಮಿಗಿಲಾಗಿ ಬ್ಯಾಂಕ್ ನೀಡುವ ವೈವಿಧ್ಯಮಯ ಸೇವೆಯ ಪ್ರಮಾಣ ವಂತೂ ವಿಪರೀತವಾಗಿ ಬೆಳೆದುಬಂದಿರುವುದು ಕಂಡುಬರುತ್ತಿದೆ. ಒಟ್ಟಿನಲ್ಲಿ ಬ್ಯಾಂಕಿನ ದೃಷ್ಟಿಕೋನ ಲಾಭಗಳಿಕೆ ಮತ್ತು ಸಾರ್ವ ಜನಿಕ ಸೇವೆ ಎರಡೂ ಆಗಿದೆ. ಬ್ಯಾಂಕಿನ ವ್ಯವಹಾರ ವಹಿವಾಟು ಗಳು ಹಿಂದಿನ ಕಾಲದಲ್ಲಿದ್ದಂತೆ ಇಲ್ಲ. ಅವು ವಿವಿಧ ರೀತಿಯವಾ ಗಿವೆ. ಸರ್ಕಾರಗಳು ನೀಡುತ್ತಿದ್ದ ಕೆಲವು ಸೇವೆ ಸೌಕರ್ಯಗಳನ್ನು ಈಗ ಬ್ಯಾಂಕುಗಳೇ ಮಾಡಬೇಕಾಗಿ ಬಂದಿದೆ. ಉದಾಹರಣೆಗೆ, ನಿವೃತ್ತಿದಾರರ ಪಿಂಚಣಿ ಪಾವತಿ, ವಿದ್ಯುಚ್ಛಕ್ತಿ ಹಣ ಪಾವತಿ, ನೀರಿನ ಹಣ ಪಾವತಿ, ಕರ ಪಾವತಿ ಇತ್ಯಾದಿ. ಹೀಗೆ ಕೆಲಸದ ಭಾರ ಬಹಳ ಹೆಚ್ಚಾಗಿದೆ. ಇಂತಹ ಬೆಳೆಯುತ್ತಿರುವ ವ್ಯವಹಾರಗಳನ್ನು

ಗಮನಿಸಿದರೆ ಅದಕ್ಕೆ ನೀಡಿರುವ ಸಿಬ್ಬಂದಿ ವರ್ಗದ ಸಂಖ್ಯೆ ತೀರಾ ಕಡಿಮೆ ಎನಿಸಬಹುದು. ಶಾಖೆಗಳಲ್ಲಿ ಖಾತೆಗಳ ಸಂಖ್ಯೆ ಹೆಚ್ಚಿದಂತೆಲ್ಲಾ ಸಿಬ್ಬಂದಿ ಪಾಲಿಸಬೇಕಾದ ನಿಯಮಗಳನ್ನು ಪೂರ್ಣವಾಗಿ ಪಾಲಿಸಲು ಸಾಧ್ಯವಾಗದೇ ಇರಬಹುದು. ಇಂತಹ ಪರಿಸ್ಥಿತಿ ಮುಂದುವರಿದುಕೊಂಡು ಹೋದಂತೆ ನೀತಿನಿಯಮಗಳ ಉಲ್ಲಂಘನೆಯೂ ಹೆಚ್ಚಾಗಿ ತಪ್ಪುಗಳಿಗೆ ಅವಕಾಶವಾಗಬಹುದು. ಇದರಿಂದಾಗಿ ಕಾಲಕ್ರಮೇಣ ಲೆಕ್ಕಪತ್ರಗಳು ತಾಳೆ ಆಗುವ ಕೆಲಸ ಸ್ಥಗಿತವಾಗಿ ಮುಂದೊಂದು ದಿನ ಅದೇ ಆಂತರಿಕ ಸಿಬ್ಬಂದಿಯಿಂದಲೇ ವಂಚನೆ ಆಗುವುದಕ್ಕೆ ಅನುಕೂಲವಾಗಬಹುದು.

### ವಂಚನೆ ಏಕೆ ಮಾಡುತ್ತಾರೆ

ವಂಚನೆ ಪ್ರಕರಣಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅದಕ್ಕೆ ಅನೇಕ ಕಾರಣಗಳು ಕಂಡುಬರುತ್ತವೆ. ಹೆಚ್ಚಿನ ದುಶ್ಚಟಗಳಿಗೆ ಬಲಿಯಾಗಿ ಆ ವ್ಯೂಹದಿಂದ ಹೊರಬರಲಾರದೆ, ಸ್ವಂತ ದುಡಿಮೆಯಿಂದ ಬರುವ ಹಣವೂ ಸಾಲದೆ, ಬೇರಾವ ದಾರಿಯೂ ಕಾಣದೆ, ಇಂಥ ವಂಚನೆ ಕಾರ್ಯಕ್ಕಿಳಿದಿರುವ ಉದಾಹರಣೆಗಳಿವೆ.

ಇನ್ನು ಕೆಲವು ಪ್ರಸಂಗಗಳಲ್ಲಿ ಒಬ್ಬ ವ್ಯಕ್ತಿ ಶ್ರೀಮಂತನಾದಾಗ್ಯೂ ಒಮ್ಮೊಮ್ಮೆ ದುರ್ಬಲ ಮನಸ್ಸುಳ್ಳವನಾಗಿದ್ದು ಇಂತಹ ಕಾರ್ಯಕ್ಕಿಳಿಯಬಹುದು. ಮತ್ತೆ ಕೆಲವು ಪ್ರಸಂಗಗಳಲ್ಲಿ ಒಬ್ಬ ವ್ಯಕ್ತಿ ತನಗೆ ಸಾಕಷ್ಟು ಆದಾಯವಿದ್ದಾಗ್ಯೂ ಅತಿ ಹೆಚ್ಚಿನ ಆಸೆಯಿಂದಾಗಿ ಒಮ್ಮಿಂದೊಮ್ಮೆಲೇ ಕುಬೇರನಾಗುವ ಕನಸುಗಳನ್ನು ಕಂಡು ಇಂತಹ ಕಾರ್ಯಗಳಲ್ಲಿ ತೊಡಗಿರುತ್ತಾನೆ. ಆದರೆ ಆಶ್ಚರ್ಯಕರ ಸಂಗತಿ ಏನೆಂದರೆ ತಾವು ಈ ತೆರನಾದ ದುಷ್ಕೃತ್ಯಗಳಿಗೆ ಕೈಹಾಕಿದರೆ ಮುಂದೊಂದು ದಿನ ತಮ್ಮ ದುಷ್ಕೃತ್ಯವು ಬೆಳಕಿಗೆ ಬಂದೇ ಬರುತ್ತದೆ. ತಾವು ಶಿಕ್ಷೆಗೊಳಗಾಗುತ್ತೇವೆ ಎಂಬುದರ ಬಗ್ಗೆ ಕಿಂಚಿತ್ತೂ ಪರಿವೆ ಇಲ್ಲದಿರುವುದು ಕೆಲವು ವ್ಯಕ್ತಿಗಳಿಗೆ ಇಂತಹ ಕಾರ್ಯವೆಸಗಿದ ಬಳಿಕ ಜ್ಞಾನೋದಯವುಂಟಾದರೂ ಸಹ ಆ ವೇಳೆಗೆ ಕಾಲಮಿಂಚಿ ಹೋಗಿರುವುದರಿಂದ ಮತ್ತೆ ಭಂಡ ಧೈರ್ಯದಿಂದ ಆ ದಾರಿಯಲ್ಲೇ ಮುನ್ನುಗ್ಗಿ ಸಾಧ್ಯವಾದಷ್ಟೂ ದುರ್ಲಾಭ ಪಡೆಯುವ ಯೋಚನೆ ಮಾಡಿರುತ್ತಾರೆ.

### ಯಾರು ಹೇಗೆ ವಂಚಿಸುತ್ತಾರೆ?

ಬ್ಯಾಂಕಿಗೆ ವಂಚನೆ ಯಾರಿಂದ ಆಗುತ್ತದೆ ಎಂಬ ವಿಷಯವನ್ನು ಮೂರು ವಿಭಾಗಗಳಲ್ಲಿ ಈ ಕೆಳಕಂಡಂತೆ ತಿಳಿಸಬಹುದು.

1 ಬ್ಯಾಂಕಿಗೆ ಸಂಬಂಧಪಡದ ಹೊರ ವ್ಯಕ್ತಿಗಳಿಂದ—ಬ್ಯಾಂಕಿನ ಸಿಬ್ಬಂದಿಯ ಸಹಾಯವಿಲ್ಲದೆ,

2 ಬ್ಯಾಂಕಿಗೆ ಸಂಬಂಧಪಡದ ಹೊರ ವ್ಯಕ್ತಿಗಳಿಂದ—ಬ್ಯಾಂಕಿನ ಸಿಬ್ಬಂದಿಯ ಸಹಾಯದಿಂದ; ಅಂದರೆ, ಇಂತಹ ಪ್ರಕರಣಗಳಿಗೆ ಬ್ಯಾಂಕಿನ ಸಿಬ್ಬಂದಿ ಅಧಿಕಾರಿಗಳು ಶಾಮೀಲಾಗಿದ್ದು ಅವರೂ ಸಹ ಇದರಲ್ಲಿ ಲಾಭ ಪಡೆಯುತ್ತಾರೆ,

3 ಬ್ಯಾಂಕಿಗೆ ಸಂಬಂಧಪಟ್ಟ ಸಿಬ್ಬಂದಿ ಅಧಿಕಾರಿ ವರ್ಗದವರಿಂದಲೇ ನಡೆಯುವಂತಹದ್ದು.

ಈ ಮೇಲ್ಕಂಡ ಅಂಶಗಳನ್ನು ಕೆಲವು ಉದಾಹರಣೆಗಳೊಡನೆ ಈ ಮುಂದಿನಂತೆ ಸಂಕ್ಷಿಪ್ತವಾಗಿ ತಿಳಿಸಬಹುದು.

ಒಬ್ಬ ವ್ಯಕ್ತಿ ಬ್ಯಾಂಕಿನ ಶಾಖೆಯಲ್ಲಿ ಗುಪ್ತ ನಾಮದಿಂದ ಒಂದು ಖಾತೆಯನ್ನು ತೆರೆದು, ಕೆಲವು ದಿನಗಳವರೆಗೆ ಆ ಖಾತೆಯ ಮೂಲಕ ಸಣ್ಣ ಪ್ರಮಾಣದ ವ್ಯವಹಾರ ನಡೆಸುತ್ತಾನೆ ಮತ್ತು ಬ್ಯಾಂಕಿನ ವ್ಯವಸ್ಥಾಪಕರ ಸಿಬ್ಬಂದಿಯ ವಿಶ್ವಾಸ ಗಳಿಸುತ್ತಾನೆ. ನಂತರದಲ್ಲಿ ಎಲ್ಲಿಂದಲೋ ಕದ್ದು ತಂದಿರುವ ಡ್ರಾಫ್ಟನ್ನೋ ಚೆಕ್ಕುಗಳನ್ನೋ ತನ್ನ ಖಾತೆಗೆ ಜಮಾ ಮಾಡಿ ಮರುಕ್ಷಣವೇ ಹಣ ಹಿಂದೆ ಪಡೆಯುತ್ತಾನೆ. ಕೆಲವು ವೇಳೆ ಬ್ಯಾಂಕಿನ ಇತರೆ ಶಾಖೆಗೆ ಸಂಬಂಧಿಸಿದ ಡ್ರಾಫ್ಟ್‌ಗಳನ್ನೂ ಹಣ ವರ್ಗಾವಣೆ ಆದೇಶಗಳನ್ನೂ ಕದ್ದು ಅದರಲ್ಲಿ ತನಗೆ ಸೂಕ್ತವಾಗುವಂತೆ ಹಣ ಭರ್ತಿ ಮಾಡಿಕೊಂಡು ಕಳ್ಳ ರುಜು ಹಾಕಿ ಸುಳ್ಳು ಹೆಸರಿನಲ್ಲಿ ಖಾತೆಗಳನ್ನು ಪ್ರಾರಂಭಿಸಿ ತನ್ಮೂಲಕ ಹಣ ತೆಗೆದುಕೊಳ್ಳುವುದು ಇನ್ನೊಂದು ರೀತಿಯ ವಂಚನೆಯಾಗಿರುತ್ತದೆ. ಕೆಲವು ವೇಳೆ ಟಪಾಲಿನ ಮೂಲಕ ಬರುವ ಚೆಕ್ಕುಗಳನ್ನೂ ಡ್ರಾಫ್ಟ್‌ಗಳನ್ನೂ ಕದ್ದು ಅದರಲ್ಲಿ ನಮೂದಿಸಿರುವ ಹೆಸರು ಹಣದ ಮೊತ್ತ ಇತ್ಯಾದಿಗಳನ್ನು ತಿದ್ದಿ ತನ್ನ ಖಾತೆಗೆ ಜಮಾ ಮಾಡಿಕೊಳ್ಳುತ್ತಾನೆ. ಹೀಗೆ ನಾನಾ ರೀತಿಯ ವಂಚನೆ ಪ್ರಕರಣಗಳು ಬೆಳಕಿಗೆ ಬರುತ್ತಲೇ ಇರುತ್ತವೆ. ಒಂದೊಂದು ಪ್ರಕರಣವೂ ವಿಭಿನ್ನ ರೀತಿಯದಾಗಿದ್ದು ಪ್ರತಿಯೊಂದನ್ನೂ ಬಿಡಿಸಿ ಹೇಳುವುದು ಇಲ್ಲಿ ಅನಾವಶ್ಯಕವೆನಿಸುತ್ತದೆ.

### ಕೆಲವು ಪ್ರಕರಣಗಳು

ಕೆಲವು ನಿರ್ದಿಷ್ಟ ಪ್ರಸಂಗಗಳನ್ನು ಇಲ್ಲಿ ತಿಳಿಸಬಹುದು. ಅದೊಂದು ಗ್ರಾಮೀಣ ಪ್ರದೇಶದಲ್ಲಿನ ಒಂದು ಸಣ್ಣ ಶಾಖೆ. ಅಲ್ಲಿನ ವ್ಯವಹಾರ ವಹಿವಾಟುಗಳು ಸಣ್ಣ ಪ್ರಮಾಣದವೇ ಆಗಿರುತ್ತವಷ್ಟೆ. ಅಲ್ಲಿಗೆ ಒಬ್ಬಾತ ಒಂದು ದಿನ ಭೇಟಿಕೊಟ್ಟು ತಾನೊಬ್ಬ ದೊಡ್ಡ ರಫ್ತು ವ್ಯಾಪಾರಿಯೆಂದೂ, ಆ ಊರಿನಲ್ಲಿ ತನ್ನ ವ್ಯವಹಾರವನ್ನು ಹೊಸದಾಗಿ ಪ್ರಾರಂಭಿಸಿರುವುದಾಗಿಯೂ ತಿಳಿಸಿ ಒಂದು ಖಾತೆಯನ್ನು ಪ್ರಾರಂಭಿಸಿದ. ಹಾಗೆ ಖಾತೆ ತೆರೆಯುವಾಗ ಕಾಲಕ್ರಮೇಣ ತನ್ನ ವ್ಯವಹಾರದಲ್ಲಿನ ಲಾಭಾಂಶದಿಂದ ಆ ಶಾಖೆಗೆ ಹೆಚ್ಚಿನ ಮೊತ್ತದ ಠೇವಣಿ ನೀಡುವುದಾಗಿ ತಿಳಿಸಿದ. ಹಾಗೆ ಹೇಳುತ್ತಾ, ಬ್ಯಾಂಕಿನ ವ್ಯವಸ್ಥಾಪಕರ, ಇದ್ದ ಒಂದೆರಡು ಸಿಬ್ಬಂದಿ ವರ್ಗದವರ ವಿಶ್ವಾಸ ಗಳಿಸಿದ. ಖಾತೆ ಪ್ರಾರಂಭಮಾಡಿದ ಕೆಲವೇ ದಿನಗಳಲ್ಲಿ ದೊಡ್ಡ ಮೊತ್ತದ ಚೆಕ್ಕೊಂದನ್ನು ತಂದು ತನ್ನ ಖಾತೆಗೆ ಜಮಾ ಮಾಡಲು ನೀಡಿದ. ಆ ಚೆಕ್ಕು ದೂರದ ಊರಿನಲ್ಲಿದ್ದ ಬ್ಯಾಂಕೊಂದಕ್ಕೆ ಸಂಬಂಧಪಟ್ಟಿದ್ದಾದ್ದರಿಂದ ಅಲ್ಲಿಂದ ಹಣ ಪಾವತಿಯಾಗಿ ಬರುವುದು ತಡವಾಗುವುದೆಂದು ತಾನೇ ಆ

ಚೆಕ್ಕನ್ನು ತೆಗೆದುಕೊಂಡು ಹೋಗಿ ಅಲ್ಲಿಗೆ ಕೊಟ್ಟು, ಅಲ್ಲಿಂದ ಹಣ ಪಾವತಿಯಾದ ರಸೀತಿಯನ್ನು ತಂದುಕೊಡುವುದಾಗಿಯೂ ಹೇಳಿ ವ್ಯವಸ್ಥಾಪಕರನ್ನು ನಂಬಿಸಿದ. ವ್ಯವಸ್ಥಾಪಕರಿಗೆ ಆತ ಹೂಡಿದ್ದ ವಂಚನೆಯ ಜಾಲದ ಸುಳಿವು ಸಿಗದಾಯಿತು. ಅಲ್ಲದೆ ಮುಂದಿನ ಕೆಲವೇ ದಿನಗಳಲ್ಲಿ ಶಾಖೆಗೆ ಅವನಿಂದ ಹೆಚ್ಚಿನ ಮೊತ್ತದ ಠೇವಣಿ ಬರುವ ನಿರೀಕ್ಷೆ ಇಟ್ಟುಕೊಂಡಿದ್ದರಿಂದ ಅವರು ಆ ಖಾತೆದಾರನ ಮಾತನ್ನು ನಂಬಿ ತಮ್ಮ ಶಾಖೆಯ ಅಗತ್ಯವಾದ ಫಾರಂಗಳನ್ನು ಭರ್ತಿಮಾಡಿ ಆ ಖಾತೆದಾರನ ಮೂಲಕವೇ ಚೆಕ್ಕನ್ನು ಉದ್ದೇಶಿತ ಬ್ಯಾಂಕಿಗೆ ಕಳುಹಿಸಿದರು. ಹಾಗೆ ಕಳುಹಿಸಿದ ಎರಡನೆಯ ದಿನವೇ ಖಾತೆದಾರ ತಾನೇ ತೆಗೆದುಕೊಂಡು ಹೋಗಿದ್ದ ಚೆಕ್ಕಿನ ಪಾವತಿ ಆದೇಶವನ್ನು ತಂದು ಈ ಶಾಖೆಗೆ ಕೊಟ್ಟು ಹಣವನ್ನು ತನ್ನ ಖಾತೆಗೆ ಜಮಾ ಮಾಡಿಸಿ ಆ ದಿನವೇ ಕನಿಷ್ಠ ಮೊತ್ತವನ್ನು ಖಾತೆಯಲ್ಲಿ ಉಳಿಸಿ ಉಳಿದ ಹಣವನ್ನು ಹಿಂಪಡೆದ. ಇದೇ ರೀತಿ ನಾಲ್ಕಾರು ಬಾರಿ ಹೆಚ್ಚಿನ ಮೊತ್ತದ ಚೆಕ್ಕುಗಳ ಪಾವತಿ ಆದೇಶವನ್ನು ತಾನೇ ತಂದುಕೊಟ್ಟು ಖಾತೆಗೆ ಜಮಾ ಮಾಡಿಸಿ ಹಣವನ್ನು ಹಿಂಪಡೆದ. ಈ ಮಧ್ಯೆ ಒಂದೆರಡು ಬಾರಿ ಸಣ್ಣ ಮೊತ್ತದ ಠೇವಣಿಯನ್ನು ಶಾಖೆಯಲ್ಲಿ ಇಟ್ಟ. ಇಂತಹ ಚೆಕ್ಕುಗಳನ್ನು ಕೊಡುವ ಮತ್ತು ಪಾವತಿ ಆದೇಶಗಳನ್ನು ತಾನೇ ಖುದ್ದಾಗಿ ತಂದು ನೀಡಿ ಖಾತೆಯ ಮೂಲಕ ಹಣ ಡ್ರಾ ಮಾಡುವ ವ್ಯವಹಾರ ಅನೇಕ ಲಕ್ಷ ರೂ.ಗಳವರೆಗೆ ನಡೆಯಿತು.

ಅನಂತರ ಆ ವ್ಯಕ್ತಿ ಬ್ಯಾಂಕಿನ ಕಡೆ ಬರಲೇ ಇಲ್ಲ. ಬ್ಯಾಂಕಿನ ವ್ಯವಸ್ಥಾಪಕರು ಅನುಮಾನದಿಂದ ಆ ವ್ಯಕ್ತಿ ಖಾತೆ ತೆರೆಯುವಾಗ ನೀಡಿದ್ದ ವಿಳಾಸವನ್ನು ಹುಡುಕಿಕೊಂಡು ಹೋದಾಗ ಆ ವಿಳಾಸವೇ ಸರಿಯಾದದ್ದಲ್ಲವೆಂದೂ ಆ ಸುತ್ತಮುತ್ತಲಿನ ಪ್ರದೇಶದಲ್ಲಿ ಅಂತಹ ಹೆಸರಿನ ವ್ಯಕ್ತಿಯಾಗಲಿ ಅಂತಹ ವ್ಯವಹಾರವಾಗಲಿ ಇಲ್ಲವೆಂದೂ ತಿಳಿದುಬಂತು. ಮುಂದೆ ಕೆಲವೇ ದಿನಗಳಲ್ಲಿ ಅಂತಹ ವಂಚನೆಯ ಪ್ರಕರಣಗಳು ಸುತ್ತಮುತ್ತಲ ಇತರ ಬ್ಯಾಂಕುಗಳ ಶಾಖೆಗಳಲ್ಲಿಯೂ ನಡೆದಿರುವುದಾಗಿ ತಿಳಿದುಬಂತು. ಆ ವ್ಯಕ್ತಿ ಸುಳ್ಳು ಹೆಸರಿನಲ್ಲಿ ಖಾತೆಯನ್ನು ಪ್ರಾರಂಭಿಸಿ ಯಾವುದೋ ಕದ್ದು ತಂದ ಚೆಕ್ಕುಗಳನ್ನು ಬ್ಯಾಂಕಿಗೆ ನೀಡಿ ಅದೇ ರೀತಿ ಕದ್ದು ತಂದ ಪಾವತಿ ಆದೇಶಗಳನ್ನು ಭರ್ತಿಮಾಡಿ ಅವುಗಳಿಗೆ ಕಳ್ಳ ರುಜುಗಳನ್ನು ಹಾಕಿ ತನ್ಮೂಲಕ ಹಣವನ್ನು ಅಪಹರಿಸುತ್ತಿದ್ದ. ಇದಕ್ಕೆ ಆ ಇನ್ನೊಂದು ಬ್ಯಾಂಕಿನ ಸಿಬ್ಬಂದಿಯ ಸಹಾಯವನ್ನು ಪಡೆದುಕೊಂಡಿರಬಹುದು. ಬ್ಯಾಂಕಿನ ವ್ಯವಸ್ಥಾಪಕರ ಮತ್ತು ಸಿಬ್ಬಂದಿಗಳ ಅಜಾಗರೂಕತೆಯಿಂದಲೂ ಬ್ಯಾಂಕಿನ ನೀತಿನಿಯಮಗಳನ್ನು ನಿಷ್ಕೃಷ್ಟವಾಗಿ ಪಾಲಿಸದಿದ್ದುದರಿಂದಲೂ ವಂಚನೆಗೊಳಗಾಗುವ ಪ್ರಸಂಗ ಒದಗಿಬಂತೆಂದೂ ತಿಳಿಯಿತು. ಒಂದು ಹೊಸ ಖಾತೆಯನ್ನು ತೆರೆಯುವಾಗ ಅದಕ್ಕೆ ಅನುಸರಿಸಬೇಕಾದ ನಿಯಮಗಳನ್ನು ಪಾಲಿಸಿರಲಿಲ್ಲ ಮತ್ತು ಹೆಚ್ಚಿನ ಮೊತ್ತದ ಚೆಕ್ಕುಗಳನ್ನು ಬೇರೆ ಕಡೆಗೆ ಕಳುಹಿಸುವಾಗಲೂ ವಿಧಿಸಿದ್ದ ನಿಯಮಗಳನ್ನು ಪಾಲಿಸಿರಲಿಲ್ಲ. ಇಂತಹ ನಿಯಮಗಳ ಉಲ್ಲಂಘನೆಗಾಗಿ ಬ್ಯಾಂಕಿನ ಅಧಿಕಾರಿ ಶಿಸ್ತು ನಡಾವಳಿ ಕ್ರಮ ಎದುರಿಸಬೇಕಾಗಿ ಬಂತು.

ಮೇಲಿನದು ಹೊರಗಿನ ವ್ಯಕ್ತಿಯಿಂದ ಆದ ವಂಚನೆಯಾದರೆ, ಇನ್ನೊಂದು ಪ್ರಕರಣ ಬ್ಯಾಂಕಿನ ಸಿಬ್ಬಂದಿಯಿಂದಲೇ ನಡೆದದ್ದು.

ಅದೊಂದು ಸಣ್ಣ ಶಾಖೆ. ಅದಕ್ಕೆ ಒಬ್ಬ ವ್ಯವಸ್ಥಾಪಕ, ಒಬ್ಬ ನಗದಿಕಾರ ಗುಮಾಸ್ತೆ ಅಷ್ಟೆ. ಹಾಗಾಗಿ ಸಾಮಾನ್ಯವಾಗಿ ಶಾಖೆಯ ಎಲ್ಲ ಕೆಲಸಗಳನ್ನು, ಅಂದರೆ ನಗದಿದಾರನ/ಗುಮಾಸ್ತಿಕೆ ಕೆಲಸ, ರವಾನೆ ಕೆಲಸ, ಆ ಸಿಬ್ಬಂದಿಯೇ ಮಾಡಬೇಕಾಗಿತ್ತು. ಶಾಖೆಯ ವ್ಯವಸ್ಥಾಪಕರೂ ಅವರು ಈ ನಗದಿದಾರನ ಮೇಲೆ ವಿಶ್ವಾಸವಿಟ್ಟಿದ್ದರು. ಆ ವಿಶ್ವಾಸವನ್ನು ಈತ ಹೆಚ್ಚು ದಿನ ಉಳಿಸಿಕೊಳ್ಳಲಾರದೆ ಹೋದ. ಖಾತೆದಾರರು ತಂದು ಜಮಾ ಮಾಡುತ್ತಿದ್ದ ಹಣವನ್ನು ತಗೆದುಕೊಂಡು ವ್ಯವಸ್ಥಾಪಕರಿಗೆ ತಿಳಿಯದಂತೆ ರಸೀತಿಗಳನ್ನು ತಾನೇ ನೀಡತೊಡಗಿದ. ಅವರ ಪಾಸ್ ಪುಸ್ತಕಗಳಲ್ಲಿ ಹಣ ಜಮಾ ದಾಖಲೆಗಳನ್ನು ಮಾಡಿ ತಾನೇ ವ್ಯವಸ್ಥಾಪಕರ ರುಜುವಿನಂತೆ ರುಜು ಹಾಕತೊಡಗಿದ. ಇಂಥ ಹಣವನ್ನು ಸ್ವಂತಕ್ಕಾಗಿ ದುರುಪಯೋಗಪಡಿಸಿಕೊಳ್ಳುತ್ತಿದ್ದ. ಮುಂದೊಂದು ದಿನ ಖಾತೆದಾರರು ಹಣ ಹಿಂಪಡೆಯಲು ಬಂದಾಗ ತಾನೇ ಅವರ ಖಾತೆಗಳಲ್ಲಿ ಜಮದ ಸುಳ್ಳು ದಾಖಲೆ ಮಾಡಿ ಶಾಖೆಯ ವ್ಯವಸ್ಥಾಪಕರ ಕಳ್ಳ ರುಜುವನ್ನು ಹಾಕಿ ಪಾವತಿ ಆದೇಶವಾದ ನಂತರ ಹಣ ಪಾವತಿ ಮಾಡುತ್ತಿದ್ದ. ಇದೇ ರೀತಿ ಒಂದೆರಡು ವರ್ಷಗಳವರೆಗೆ ವಿವಿಧ ದಿನಗಳಲ್ಲಿ ವಿವಿಧ ಖಾತೆಗಳಲ್ಲಿ ಮಾಡಿದ. ಇದಕ್ಕಾಗಿ ಒಂದೇ ಖಾತೆಗೆ 2–3 ಲೆಡ್ಜರ್ ಹಾಳೆಗಳನ್ನು ಉಪಯೋಗಿಸಿದ.

ಶಾಖೆಗೆ ತನಿಖಾಧಿಕಾರಿಗಳು ಬಂದಾಗ ಕೂಡ ಅವರಿಗೆ ನಂಬಿಕೆ ಹುಟ್ಟಿಸಿ ಎಲ್ಲ ಖಾತೆಗಳಿಗೂ ತಾಳೆಯಾದಂತೆ ಪುಸ್ತಕದಲ್ಲಿ ನಮೂದಿಸಿ ವ್ಯವಸ್ಥಾಪಕರ ರುಜು ಹಾಕಿಸಿ ನೀಡಿದ. ಅವರೂ ಸಹ ಅವುಗಳೆಲ್ಲ ಸರಿಯಾಗಿವೆಯೆಂದು ಸರ್ಟಿಫಿಕೇಟ್ ನೀಡಿದ್ದರು. ಹೀಗೆ ಲಕ್ಷಾಂತರ ರೂ.ಗಳವರೆಗೆ ವಂಚನೆ ನಡೆದಿತ್ತು. ಮುಂದೆ ಶಾಖೆಯ ವ್ಯವಸ್ಥಾಪಕರ ಬದಲಾವಣೆ ಆದಾಗ ಈ ಪ್ರಕರಣ ಹೊರಬಿತ್ತು. ಮುಖ್ಯವಾಗಿ ಆತ ಮಾಡಿದ ವಂಚನೆಯ ಜೊತೆಗೆ ಈ ಪ್ರಕರಣಗಳಿಗೆ ಹಿಂದಿದ್ದ ವ್ಯವಸ್ಥಾಪಕರ ಮತ್ತು ತನಿಖಾಧಿಕಾರಿಗಳ ಅಜಾಗರೂಕತೆ ಮತ್ತು ಉಪೇಕ್ಷೆ ಕಾರಣವಾಗಿತ್ತೆನ್ನಬಹುದು. ಈ ಪ್ರಕರಣಗಳಲ್ಲಿ ಖಾತೆದಾರರಿಗೆ ಯಾವ ವಿಧವಾದ ಹಣದ ಹಾನಿಯೂ ಆಗಿರದಿದ್ದುದರಿಂದ ಯಾರಿಂದಲೂ ಆ ಬಗ್ಗೆ ದೂರು ಬಂದಿರಲಿಲ್ಲ. ಹೀಗಾಗಿ ಈ ಪ್ರಕರಣಗಳು ಬೇಗನೇ ಬೆಳಕಿಗೆ ಬರಲು ಸಾಧ್ಯವಾಗಲಿಲ್ಲ. ನಂತರದಲ್ಲಿ ಆ ನಗದಿಕಾರನ ವಿರುದ್ಧ ಶಿಸ್ತು ನಡಾವಳಿ ಕ್ರಮ ನಡೆದಿದ್ದು ಬೇರೆ ವಿಷಯ. ಇಲ್ಲಿ ಅದನ್ನು ತಿಳಿಸುವುದು ಅಪ್ರಸ್ತುತ.

**ಅಂಕಿ ಅಂಶಗಳು**

ಒಂದು ಅಂಕಿ ಅಂಶದ ಪ್ರಕಾರ, ವಂಚನೆ ಪ್ರಕರಣಗಳು ಯಾವ

ಯಾವ ವಿಭಾಗಗಳಲ್ಲಿ ಎಷ್ಟೆಷ್ಟು ನಡೆಯಬಹುದು ಎಂಬ ಅಂಕಿಗಳನ್ನು ಈ ಕೆಳಗೆ ಕೊಡಲಾಗಿದೆ.

| ಪ್ರಕರಣಗಳು | ಶೇಕಡಾವಾರು |
|---|---|
| 1 ಉಳಿತಾಯ ಖಾತೆ ಮತ್ತಿತರ ಠೇವಣಿ ಖಾತೆಗಳಲ್ಲಿ | 40 |
| 2 ಮುಂಗಡಗಳು, ಸಾಲುಗಳು ಇತ್ಯಾದಿ | 12 |
| 3 ಕ್ಯಾಷ್ ವಿಭಾಗದಲ್ಲಿ | 12 |
| 4 ಬ್ರಾಂಚ್ ಕ್ಲಿಯರಿಂಗ್ ವಿಭಾಗದಲ್ಲಿ | 8 |
| 5 ಡ್ರಾಫ್ಟ್, ಮೆಯಿಲ್ ಟ್ರಾನ್ಸ್‌ಫರ್ಸ್ ಮತ್ತಿತರೆ | 28 |
| | 100 |

ಮೇಲೆ ನಮೂದಿಸಿರುವ ವಿವಿಧ ವಿಭಾಗಗಳಲ್ಲಿ ವಂಚನೆ ಪ್ರಕರಣಗಳಿಗೆ ಕೆಲವು ಕಾರಣಗಳನ್ನು ಈ ಕೆಳಗೆ ಸಂಕ್ಷಿಪ್ತವಾಗಿ ನೀಡಲಾಗಿದೆ.

ಹೊಸ ಖಾತೆಗಳನ್ನು ಪ್ರಾರಂಭಿಸುವಾಗ ಸಮರ್ಪಕವಾದ ರೀತಿಯಲ್ಲಿ ಬ್ಯಾಂಕಿನ ನಿಯಮಾನುಸಾರವಾಗಿ ಪರಿಚಯ ತೆಗೆದುಕೊಳ್ಳದಿರುವುದು,

ಸ್ಥಗಿತವಾಗಿದ್ದ, ಚಾಲ್ತಿಯಲ್ಲಿ ಇರದ ಖಾತೆಗಳನ್ನು ಪುನರುಜ್ಜೀವನಗೊಳಿಸಿ ವ್ಯವಹಾರ ಮುಂದುವರಿಸಿಕೊಂಡು ಹೋಗಲು ಅವಕಾಶ ನೀಡುವಾಗ ಸರಿಯಾದ ನಿಯಮಗಳನ್ನು ಪಾಲಿಸದಿರುವುದು,

ನಕಲಿ ಪಾಸ್ ಪುಸ್ತಕವನ್ನು ನೀಡುವಾಗ ಸರಿಯಾದ ನಿಯಮವನ್ನು ಪಾಲಿಸದಿರುವುದು,

ಅನಕ್ಷರಸ್ಥರ ಖಾತೆಗಳ ವ್ಯವಹಾರಗಳ ಬಗ್ಗೆ ಎಚ್ಚರ ವಹಿಸದಿರುವುದು,

ಒಬ್ಬ ವ್ಯಕ್ತಿಯ ಖಾತೆಗೆ ಸಂಬಂಧಿಸಿದ ಚೆಕ್ಕು ಪುಸ್ತಕವನ್ನು ಮೂರನೆಯ ವ್ಯಕ್ತಿಗೆ ನೀಡುವಾಗ ನಿಯಮಗಳನ್ನು ಪಾಲಿಸದಿರುವುದು,

ಒಬ್ಬ ವ್ಯಕ್ತಿಯ ಮೇಲೆ ಮಿತಿಮೀರಿದ ಅಥವಾ ಅನಾವಶ್ಯಕವಾದ ವಿಶ್ವಾಸ ಇಟ್ಟು ಅಂಥವರಿಂದಲೇ ವಂಚಿತಗೊಳ್ಳುವುದು. ಹೊಸದಾಗಿ ಪ್ರಾರಂಭವಾದ ಖಾತೆಗಳಲ್ಲಿ ಇದ್ದಕ್ಕಿದ್ದಂತೆ ಅತಿ ಹೆಚ್ಚಿನ ಮೊತ್ತದ ವ್ಯವಹಾರ ಕಂಡುಬಂದಲ್ಲಿ ಎಚ್ಚರಿಕೆ ವಹಿಸುವುದು,

ಖಾತೆಗಳು ದೀರ್ಘಾವಧಿಯವರೆಗೆ ತಾಳೆ ಆಗದಿರುವುದು,

ಜನತಾ ಡಿಪಾಸಿಟ್ ಖಾತೆಗೆ ಸಂಬಂಧಿಸಿದ ನಿಯಮಾವಳಿಗಳನ್ನು ಸರಿಯಾಗಿ ಪಾಲಿಸದಿರುವುದು, ಇತ್ಯಾದಿ.

ಕ್ಯಾಷ್ ವಿಭಾಗದಲ್ಲಿ ಕ್ಯಾಷಿಯರ್‌ಗಳು ಅಜಾಗರೂಕತೆಯಿಂದಿರುವುದು. ಮತ್ತು ಸಂಬಂಧಿಸಿದ ಅಧಿಕಾರಿಗಳು ಬೇಜವಾಬ್ದಾರಿಯಿಂದ ವರ್ತಿಸಿ ನಿಯಮಾವಳಿಗಳನ್ನು ಪಾಲಿಸದಿರುವುದು,

ಕ್ಯಾಷ್ ವಿಭಾಗಕ್ಕೆ ಹೊರಗಿನ ವ್ಯಕ್ತಿಗಳಿಗೆ ಬರಲು ಅವಕಾಶ ನೀಡುವುದು.

ಕ್ಯಾಷಿಯರ್ ಮತ್ತು ಅಧಿಕಾರಿಗಳು ತಮ್ಮತಮ್ಮ ಬೀಗದ ಕೈಗಳನ್ನು ಇಟ್ಟುಕೊಳ್ಳುವ ಮತ್ತು ಅದರ ಮೂಲಕ ವ್ಯವಹರಿಸುವ ವಿಷಯದಲ್ಲಿ ಅಜಾಗರೂಕತೆಯಿಂದ ಇರುವುದು, ತಕ್ಕ ನಿಯಮಗಳನ್ನು ಪಾಲಿಸದಿರುವುದು, ಇತ್ಯಾದಿ.

ಚೆಕ್, ಬ್ಯಾಂಕ್ ಡ್ರಾಫ್ಟ್, ಟಪಾಲು ವರ್ಗಾವಣೆ ಆದೇಶ, ಇತ್ಯಾದಿ ಸೆಕ್ಯುರಿಟಿ ಫಾರಂಗಳ ಬಗ್ಗೆ ನಿಯಮಗಳನ್ನು ಪಾಲಿಸದಿರುವುದು,

ಹೆಚ್ಚಿನ ಮೊತ್ತದ ಡ್ರಾಫ್ಟ್‌ಗಳನ್ನು ಆದೇಶವಿಲ್ಲದೆ ಹಣ ಪಾವತಿ ಮಾಡುವ ಸಂದರ್ಭಗಳಲ್ಲಿ ಸರಿಯಾದ ಎಚ್ಚರಿಕೆ ವಹಿಸದಿರುವುದು,

ಪಾವತಿ ಆದೇಶಗಳು, ಡ್ರಾಫ್ಟ್‌ಗಳ ಹಣ ಪಾವತಿ ಮಾಡುವಾಗ ಅದರಲ್ಲಿರುವ ಸಹಿಗಳನ್ನು ಸರಿಯಾಗಿ ಪರಿಶೀಲಿಸದೆ ಇರುವುದು, ಇತ್ಯಾದಿ.

ಸಾರ್ವಜನಿಕ ರಂಗದ ಬ್ಯಾಂಕುಗಳಲ್ಲಿ ವಂಚನೆ ಪ್ರಕರಣಗಳು ದೊರಕಿದ ಅಂಕಿ ಅಂಶಗಳ ಪ್ರಕಾರ ಈ ಕೆಳಕಂಡತಿವೆ:

[ವಿವರಕ್ಕೆ 11ನೇ ಪುಟ ನೋಡಿ

ಇಂಥ ಪ್ರಕರಣಗಳು 1991-92ರಲ್ಲಿ 1,764 ಇದ್ದು ರೂ. 67.48 ಕೋಟಿಗಳಷ್ಟಾಗಿತ್ತೆಂದೂ, ಆದರೆ 1992-93 ರಲ್ಲಿ 2,217 ಪ್ರಕರಣಗಳಾಗಿದ್ದು ರೂ. 126.81 ಕೋಟಿಗಳಷ್ಟಾಗಿತ್ತೆಂದೂ ತಿಳಿಯಲಾಗಿದೆ. ಈ ಅಂಕಿ ಅಂಶಗಳಿಂದ ಇಂಥ ಪ್ರಕರಣಗಳ ಸಂಖ್ಯೆ ವರ್ಷ ವರ್ಷ ಅಧಿಕವಾಗುತ್ತಿರುವುದನ್ನು ಗಮನಿಸಬಹುದು.

## ವಂಚನೆ ತಡೆಗಟ್ಟುವಲ್ಲಿ ಇತರ ಸಂಸ್ಥೆಗಳ ಪಾತ್ರ

ಸರ್ಕಾರ ಮತ್ತು ರಿಸರ್ವ್ ಬ್ಯಾಂಕ್ ವಂಚನೆ ಪ್ರಕರಣಗಳನ್ನು ತಡೆಗಟ್ಟಲು ಆಗಿಂದಾಗ್ಗೆ ಕೆಲವು ಭದ್ರ ಕ್ರಮಗಳನ್ನು ತೆಗೆದುಕೊಳ್ಳುತ್ತಲೇ ಬರುತ್ತಿದ್ದು, ಲೆಕ್ಕ ತಪಾಸಣೆಯ ನೀತಿ ನಿಯಮಗಳಲ್ಲಿ ಬದಲಾವಣೆ ಇನ್ನಿತರ ವಿಭಾಗದಲ್ಲಿಯೂ ಬದಲಾವಣೆಗಳನ್ನು ತರುತ್ತಿದೆ. ಹೀಗೆ ಇಂಥ ಪ್ರಕರಣಗಳನ್ನು ಪತ್ತೆಹಚ್ಚಲು ಮತ್ತೆ ಮುಂದಿನ ಕ್ರಮಗಳನ್ನು ಜರುಗಿಸಲು ಪೋಲೀಸ್ ಇಲಾಖೆಯಲ್ಲದೆ ಇತರ ಸಂಸ್ಥೆಗಳೂ ಅನೇಕ ರೀತಿಯಲ್ಲಿ ಸಹಾಯಕ್ಕೆ ಬರುತ್ತಿವೆ.

ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ 1991ರಲ್ಲಿ ವಂಚನೆ ಪ್ರಕರಣಗಳು ಮತ್ತು ಅವ್ಯವಹಾರಗಳು ಇವುಗಳ ಬಗ್ಗೆ ವಿಚಾರಣೆ ನಡೆಸಲು ಒಂದು ಉನ್ನತ ಸಮಿತಿಯನ್ನು ನೇಮಿಸಿತು. ಈ ಸಮಿತಿಯ ಮುಖ್ಯಸ್ಥರಾಗಿದ್ದ ಶ್ರೀ ಘೋಷ್ ಅವರು ಮಾಡಿದ ಶಿಫಾರಸ್ಸುಗಳ ಪೈಕಿ ಹಸ್ತಾಕ್ಷರ, ರುಜು, ಕೈಬರಹಗಳನ್ನು ಪರಿಶೀಲಿಸುವ ವಿಚಾರದಲ್ಲಿ ಕೂಡ ಪ್ರಶಿಕ್ಷಣವನ್ನು ನೀಡಬೇಕು ಎಂಬುದೂ ಒಂದಾಗಿತ್ತು. ಅಲ್ಲದೆ ಇನ್ಸಿಟಿಟ್ಯೂಟ್ ಆಫ್ ಕ್ರಿಮಿನಾಲಜಿ ಮತ್ತು ಫೋರೆನ್ಸಿಕ್ ಸೈನ್ಸ್ ಇವರಲ್ಲಿ ಕಳ್ಳರುಜುಗಳನ್ನು

| ಬ್ಯಾಂಕಿನ ಹೆಸರು | 1988ರಲ್ಲಿ | | 1989ರಲ್ಲಿ | |
|---|---|---|---|---|
| | ಸಂಖ್ಯೆ | ಮೊತ್ತ (ಲಕ್ಷ ರೂ.ಗಳಲ್ಲಿ) | ಸಂಖ್ಯೆ | ಮೊತ್ತ (ಲಕ್ಷ ರೂ.ಗಳಲ್ಲಿ) |
| ಭಾರತೀಯ ಸ್ಟೇಟ್ ಬ್ಯಾಂಕ್ | 607 | 588 00 | 490 | 569 00 |
| ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ | 42 | 12.50 | 34 | 10.44 |
| ಅಲಹಾಬಾದ್ ಬ್ಯಾಂಕ್ | 72 | 35.44 | 39 | 103.00 |
| ಆಂಧ್ರ ಬ್ಯಾಂಕ್ | 29 | 454.00 | 37 | 341.00 |
| ಬ್ಯಾಂಕ್ ಆಫ್ ಬರೋಡ | 77 | 63.94 | 91 | 82.68 |
| ಬ್ಯಾಂಕ್ ಆಫ್ ಇಂಡಿಯಾ | 135 | 208.00 | 114 | 165.00 |
| ಕೆನರಾ ಬ್ಯಾಂಕ್ | | 91.60 | 134 | 311.00 |
| ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ | 63 | 107.00 | 63 | 285.00 |
| ಇಂಡಿಯನ್ ಬ್ಯಾಂಕ್ | 67 | 32.09 | 67 | 34.58 |
| ಇಂಡಿಯನ್ ಓವರ್‌ಸೀಸ್ ಬ್ಯಾಂಕ್ | 72 | 11.42 | 37 | 772.00 |
| ಪಂಜಾಬ್ ನ್ಯಾಷನಲ್ ಬ್ಯಾಂಕ್ | 33 | 69.31 | 39 | 140.00 |
| ಸಿಂಡಿಕೇಟ್ ಬ್ಯಾಂಕ್ | 102 | 130 00 | 9 | 173.00 |
| ವಿಜಯ ಬ್ಯಾಂಕ್ | 36 | 24.25 | 47 | 280.00 |

ಪತ್ತೆ ಹಚ್ಚುವ ಬಗ್ಗೆ ಇರುವ ಮಾಹಿತಿಗಳನ್ನೂ ಪುಸ್ತಕಗಳನ್ನೂ ಬ್ಯಾಂಕು ಅಧಿಕಾರಿಗಳಿಗೆ ಒದಗಿಸಿಕೊಡಬೇಕೆಂಬುದು ಇತ್ತು. ಹಾಗಾಗಿ ಮೇಲೆ ತಿಳಿಸಿದ ಸಂಸ್ಥೆ ಬ್ಯಾಂಕುಗಳಿಗೆ ಇಂಥ ವಿಷಯಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಸಂಕ್ಷಿಪ್ತವಾಗಿ ಒದಗಿಸಿದೆ. ಈ ಮಾಹಿತಿಯನ್ನು ಅನುಸರಿಸಿ ವಂಚಿಸಿದ ವ್ಯಕ್ತಿಗಳ ರುಜು, ಕೈಬರಹಗಳು ಇತ್ಯಾದಿಗಳನ್ನು ಕಂಡುಹಿಡಿಯಲು ತಕ್ಕ ಮಟ್ಟಿಗೆ ಅನುಕೂಲವಾದಂತಾಗಿದೆ. ಈ ಬಗ್ಗೆ ಪ್ರಶಿಕ್ಷಣವನ್ನು ನೀಡಲೂ ವ್ಯವಸ್ಥೆ ಮಾಡಲಾಗಿದೆ. ಆದರೆ ಈ ಮಾಹಿತಿಗಳು ಮತ್ತು ಉಪಕರಣಗಳು ಎಲ್ಲರಿಗೂ, ಎಲ್ಲಾ ಕಾಲದಲ್ಲೂ ದೊರೆಯಲು ಸಾಧ್ಯವಾಗಿಲ್ಲ.

1964ರಲ್ಲಿ ಸ್ಥಾಪಿತವಾದ ಕೇಂದ್ರೀಯ ಜಾಗೃತ ಆಯೋಗ ಇಂಥ ಸಂಸ್ಥೆಗಳಲ್ಲಿ ಒಂದು. ಈ ಸಂಸ್ಥೆ ಇಂಥ ವಂಚನೆ ಅವ್ಯವಹಾರ ಪ್ರಕರಣಗಳ ಬಗ್ಗೆ ಆದೇಶ ನೀಡುತ್ತದೆ. ಇದೇ ರೀತಿ ಇನ್ನೊಂದು ಸಂಸ್ಥೆಯಾದ, 1963ರಲ್ಲಿ ಸ್ಥಾಪಿತವಾದ, ಸೆಂಟ್ರಲ್ ಬ್ಯೂರೊ ಆಫ್ ಇನ್‌ವೆಸ್ಟಿಗೇಷನ್ ಸಹ ತನಿಖೆ ನಡೆಸಿ ಕ್ರಮ ಜರುಗಿಸಲು ಸಹಾಯ ಮಾಡುತ್ತಿದೆ.

ಬ್ಯಾಂಕುಗಳು, ಹೊರಗಿನ ವ್ಯಕ್ತಿಗಳಿಂದ ನಡೆದ ವಂಚನೆ ಪ್ರಕರಣಗಳಲ್ಲಿ ಬ್ಯಾಂಕ್ ಸಿಬ್ಬಂದಿಯೂ ಶಾಮೀಲಾಗಿದ್ದು ಇವರೊಡನೆ ಲಂಚಕೋರತನವೂ ಸೇರಿರುವ ಸಂದರ್ಭಗಳಿರುತ್ತವೆ. ಇಂಥ ಸಂದರ್ಭಗಳಲ್ಲಿ ಬ್ಯಾಂಕುಗಳು ತಪ್ಪಿತಸ್ಥರ ವಿರುದ್ಧ ಬ್ಯಾಂಕಿನ ನಿಯಮಾನುಸಾರವಾಗಿ ಕ್ರಮ ಜರುಗಿಸುವುದರ ಜೊತೆಗೆ ಇಂಥ ಪ್ರಕರಣಗಳಲ್ಲಿ ಕೇಂದ್ರೀಯ ಜಾಗೃತ ಆಯೋಗದ ಸಹಾಯ ಕೋರುತ್ತವೆ. ಮತ್ತೆ ಈ ಆಯೋಗದ ಆದೇಶವನ್ನು ಪಡೆದು ಮುಂದಿನ ಕ್ರಮ ಜರುಗಿಸಲಾಗುತ್ತದೆ.

ಕೇಂದ್ರೀಯ ಜಾಗೃತ ಆಯೋಗಕ್ಕೆ ಪ್ರಕರಣಗಳನ್ನು ಅದರ ಪರಿಶೀಲನೆಗೆ ಮತ್ತು ಆದೇಶಕ್ಕೆ ಕಳುಹಿಸಬೇಕಾದರೆ ಕೆಲವು ನಿರ್ದಿಷ್ಟ ನಿಯಮಗಳಿವೆ. ಅಂದರೆ ತಪ್ಪಿತಸ್ಥರ ಸ್ಥಾನಮಾನ, ಸಂಬಳ ಇತ್ಯಾದಿ ಇವುಗಳನ್ನು ಅನುಸರಿಸಿ ಆ ಆಯೋಗದ ಆದೇಶ ಕೋರಬೇಕಾಗುತ್ತದೆ.

ಈಚೆಗೆ ಕೇಂದ್ರದ ಆದೇಶದಂತೆ ಪ್ರತಿಯೊಂದು ಬ್ಯಾಂಕಿನ ಕೇಂದ್ರ ಕಛೇರಿಯಲ್ಲೂ ಒಂದು ಜಾಗೃತ ವಿಭಾಗವನ್ನು ಸ್ಥಾಪಿಸಲಾಗಿದ್ದು ಬ್ಯಾಂಕಿನ ವ್ಯವಸ್ಥಾಪಕರಲ್ಲಿ ಒಬ್ಬರು ಇದಕ್ಕೆ ಮುಖ್ಯಸ್ಥರಾಗಿರುತ್ತಾರೆ. ಈ ವಿಭಾಗದಲ್ಲಿ ಹಿರಿಯ ಹಾಗೂ ಅನುಭವಿ ಅಧಿಕಾರಿಗಳು ಇದ್ದು ಯಾವುದೇ ದೂರು ಅಥವಾ ಇತರೆ ವಿಭಾಗಗಳಿಂದ ಬಂದ ಮಾಹಿತಿಗಳ ಆಧಾರದ ಮೇಲೆ ಕೂಲಂಕಷ ತನಿಖೆ ನಡೆಸುತ್ತಾರೆ ಮತ್ತು ತಮ್ಮ ವರದಿಯನ್ನು ಶೀಘ್ರವಾಗಿ ಮೇಲಧಿಕಾರಿಗೆ ಸಲ್ಲಿಸುತ್ತಾರೆ. ಇಂಥ ವರದಿಗಳ ಆಧಾರದ ಮೇಲೆ ಮುಖ್ಯಸ್ಥರು ಮುಂದಿನ ಕ್ರಮ ಜರುಗಿಸಲು ಆದೇಶ ನೀಡುತ್ತಾರೆ. ಇಂಥ ಪ್ರಕರಣಗಳನ್ನು ಎರಡು ವಿಧವಾಗಿ ವಿಂಗಡಿಸುತ್ತಾರೆ :

1 ವಿಜಿಲೆನ್ಸ್ ಪ್ರಕರಣಗಳು,
2 ನಾನ್-ವಿಜಿಲೆನ್ಸ್ ಪ್ರಕರಣಗಳು.

ವಿಜಿಲೆನ್ಸ್ ಪ್ರಕರಣಗಳನ್ನು ಸಿ. ಬಿ. ಐ. ಗೆ ಮುಂದಿನ ತನಿಖೆಗೆ ಕಳುಹಿಸಲಾಗುತ್ತದೆ. ಅಲ್ಲಿಂದ ವರದಿ ಬಂದ ನಂತರ ಮುಂದಿನ ಕ್ರಮ ಕೈಗೊಳ್ಳಲಾಗುತ್ತದೆ.

ನಾನ್-ವಿಜಿಲೆನ್ಸ್ ಪ್ರಕರಣಗಳಲ್ಲಿ ಬ್ಯಾಂಕು ತನ್ನದೇ ಆದ ನಿರ್ಧಾರ ತೆಗೆದುಕೊಂಡು ಮುಂದಿನ ಕ್ರಮ ಜರುಗಿಸುತ್ತದೆ.

## ತಡೆಗಟ್ಟುವ ಇತರ ಕ್ರಮಗಳು

ಬುಡಮೂಲದಿಂದ ತೊಡೆದುಹಾಕಲು ಅಸಾಧ್ಯವೆನಿಸಿದಾಗ್ಯೂ ಅಂಥ ಪ್ರಕರಣಗಳು ಆಗದಂತೆ ತಡೆಗಟ್ಟುವ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ಅಂಥವುಗಳನ್ನು ಸಂಕ್ಷಿಪ್ತವಾಗಿ ಕೆಳ ಕಂಡಂತೆ ತಿಳಿಸಬಹುದು.

## ಶಾಖೆಗಳಲ್ಲಿ

ಬ್ಯಾಂಕಿನಲ್ಲಿ ಹೊಸ ಖಾತೆಗಳನ್ನು ಪ್ರಾರಂಭಿಸುವಾಗ ಅದಕ್ಕೆ ಸಂಬಂಧಿಸಿದ ಎಲ್ಲ ನೀತಿ ನಿಯಮಗಳನ್ನು ಸಹ ಜಾಗರೂಕತೆಯಿಂದ ಪಾಲಿಸಬೇಕು. ಯಾವ ವಿಧದಲ್ಲೂ ಅದರಿಂದ ವಿಚಲಿತರಾಗ ಬಾರದು.

ಬ್ಯಾಂಕಿನ ವ್ಯವಸ್ಥಾಪಕರು ಇತರ ಅಧಿಕಾರಿಗಳ ಶಾಖೆಯ ಎಲ್ಲ ಪುಸ್ತಕಗಳನ್ನು, ಲೆಡ್ಜರುಗಳನ್ನು, ರಿಜಿಸ್ಟರುಗಳನ್ನು ಪ್ರತಿ ದಿನವೂ ಪರಿಶೀಲಿಸುತ್ತಿರಬೇಕು ; ಮತ್ತು ಬ್ಯಾಂಕಿನ ಆದೇಶಗಳಿಗೆ ಅನುಸಾರವಾಗಿ ಬರೆಯಲಾಗಿದೆಯೇ ಎಂದು ಜಾಗರೂಕತೆಯಿಂದ ಗಮನಿಸಬೇಕು.

ಬ್ಯಾಂಕಿನ ಸಿಬ್ಬಂದಿ ವರ್ಗದವರ ಕಾರ್ಯಗಳನ್ನು ಆಗಿಂದಾಗ್ಗೆ ಬದಲಾಯಿಸುತ್ತಿರಬೇಕು. ಒಂದೇ ವಿಭಾಗದಲ್ಲಿ ದೀರ್ಘಕಾಲ ಕೆಲಸ ಮಾಡದಂತೆ ನೋಡಿಕೊಳ್ಳಬೇಕು.

ಸಿಬ್ಬಂದಿವರ್ಗದವರ ಖಾತೆಗಳು ಮತ್ತು ಅವರ ಜೀವನ ಶೈಲಿ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿರಬೇಕು.

ಯಾರೊಬ್ಬರೂ ರಜವನ್ನೇ ಹಾಕದೆ ಕೆಲಸ ಮಾಡುತ್ತಿದ್ದರೆ ಅವರನ್ನು ರಜದ ಮೇಲೆ ಹೋಗುವಂತೆ ತಿಳಿಸಬೇಕು. ಅವರ ಜಾಗಕ್ಕೆ ಬೇರೊಬ್ಬರನ್ನು ನಿಯಮಿಸುವುದು.

ಎಲ್ಲ ಅಧಿಕಾರ ವರ್ಗದವರೂ ಸಮರ್ಪಕವಾಗಿ ಕೆಲಸ ನಿರ್ವಹಿಸುತ್ತಿದ್ದಾರೆಯೇ ಎಂದು ಗಮನಿಸಬೇಕು.

ಬ್ಯಾಂಕಿನ ಶಾಖೆಯ ಎಲ್ಲಾ ವೋಚರುಗಳು ನಿಯಮಾನುಸಾರ ತಯಾರಾಗಿದ್ದು ಅವುಗಳನ್ನು ನಿಶ್ಚಿತ ಜಾಗದಲ್ಲಿ ರಕ್ಷಣೆಯಲ್ಲಿಡಲಾಗಿದೆಯೇ ಎಂದು ಗಮನಿಸಬೇಕು.

ಕ್ಯಾಷ್ ವಿಭಾಗದಲ್ಲಿ ಕೆಲಸ ಮಾಡುವ ಸಿಬ್ಬಂದಿಯ ಮೇಲೂ ಬಹಳ ಜಾಗರೂಕತೆಯಿಂದಿರಬೇಕು. ಕ್ಯಾಷ್ ವಿಭಾಗದಲ್ಲಿ ಸಾರ್ವಜನಿಕರಿಗೆ ವೇದ್ಯವಾಗುವಂತೆ ಸೂಕ್ತವಾದ ಆದೇಶಗಳನ್ನು ಹಾಕಿರಬೇಕು.

ಸೆಕ್ಯೂರಿಟಿ ಫಾರಂಗಳ ಮೇಲೆ ಸೂಕ್ತ ರಕ್ಷಣೆ ಹಿಡಿತವಿರಬೇಕು.

ಡ್ರಾಫ್ಟ್ ಇತ್ಯಾದಿಗಳನ್ನು ಹಣ ಪಾವತಿ ಮಾಡುವುದಕ್ಕೆ ಮುಂಚಿತವಾಗಿ ಅವರಲ್ಲಿ ನಮೂದಿಸಿರುವ ಅಧಿಕಾರಿಗಳ ಸಹಿಯಾಗಿದೆಯೇ ಎಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು.

ಅತಿ ಹೆಚ್ಚಿನ ಮೊತ್ತದ ಡ್ರಾಫ್ಟ್‌ಗಳ ಪಾವತಿ ಮಾಡುವಾಗ, ಆದೇಶರಹಿತ ಡ್ರಾಫ್ಟ್ ಪಾವತಿ ಮಾಡಿದಾಗ ಸಂಬಂಧಪಟ್ಟ ಶಾಖೆಯಿಂದ ಶೀಘ್ರವಾಗಿ ದೃಢೀಕರಣ ಪತ್ರವನ್ನು ತೆಗೆದುಕೊಳ್ಳಬೇಕು.

ತೀರುವೆ. (ಕ್ಲಿಯರಿಂಗ್)ಮೂಲಕ ಬರುವ ಡ್ರಾಫ್ಟ್‌ಗಳ ಪಾವತಿ ಮಾಡುವಾಗ ಹೆಚ್ಚಿಗೆ ಜಾಗರೂಕತೆಯಿಂದಿರಬೇಕು. ಕ್ಲಿಯರಿಂಗ್ ವಿಭಾಗದ ಕೆಲಸ ಸಮರ್ಪಕವಾಗಿದೆಯೇ ಎಂಬುದರ ಬಗ್ಗೆ ಜಾಗರೂಕತೆಯಿಂದ ಇರಬೇಕು.

ಖಜಾನೆ ಹುಂಡಿಗಳನ್ನು ಪಾವತಿ ಮಾಡುವಾಗ ಟ್ರೆಜರಿ ನಿಯಮಾವಳಿಗಳನ್ನು ಜಾಗರೂಕತೆಯಿಂದ ಪಾಲಿಸಬೇಕು. ಟ್ರೆಜರಿ ಅಧಿಕಾರಿಗಳ ಸಹಿಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು.

ಬ್ಯಾಂಕಿಗೆ ಬರತಕ್ಕ ದೂರುಗಳನ್ನು, ಅವು ಬರಹದಲ್ಲಿರಲಿ ಅಥವಾ ಬಾಯಿ ಮಾತಿನಲ್ಲಿರಲಿ, ಅಂಥವುಗಳಿಗೆ ವಿಶೇಷ ಗಮನ ವಿತ್ತು ಶೀಘ್ರವಾಗಿ ಪರಿಶೀಲಿಸಿ, ಪರಿಹಾರ ನೀಡಬೇಕು.

ಬ್ಯಾಂಕಿನ ಲೆಕ್ಕಪತ್ರಗಳು ನಮೂದಿಸಲಾಗಿರುವ ಪುಸ್ತಕಗಳೊಡನೆ ಆಗಿಂದಾಗ್ಗೆ ತಾಳೆ ಆಗಿವೆಯೇ ಎಂದು ಪರಿಶೀಲಿಸುತ್ತಿರಬೇಕು. ಹಾಗೇನಾದರೂ ನಿಯಮಿತ ಅವಧಿಯೊಳಗೆ ತಾಳೆ ಆಗಿರದಿದ್ದಲ್ಲಿ ಅದಕ್ಕೆ ಶೀಘ್ರವಾಗಿ ಕ್ರಮ ಕೈಗೊಳ್ಳಬೇಕು.

ಕ್ಯಾಷ್ ವಿಭಾಗದಲ್ಲಿ ಕ್ಯಾಷಿಯರ್‌ಗಳು ಕ್ಯೂಬಿಕಲ್‌ಗಳನ್ನು ಸದಾ ಕಾಲದಲ್ಲಿಯೂ, ಅಂದರೆ ಅವರು ಒಳಗೆ ಇರುವಾಗ ಮತ್ತು ಹೊರಗೆ ಹೋಗುವಾಗ, ಭದ್ರಪಡಿಸಿರಬೇಕು.

ಕರೆನ್ಸಿ ನೋಟುಗಳನ್ನು ಸಾರ್ವಜನಿಕರ ಕಣ್ಣಿಗೆ ಕಾಣುವಂತೆ ಜೋಡಿಸಿರಬಾರದು. ಮತ್ತೆ ಯಾವ ಸಂದರ್ಭದಲ್ಲಿಯೂ ಕ್ಯಾಷಿಯರನ ಮನಸ್ಸು ವಿಚಲಿತವಾಗಬಾರದು.

ತುರ್ತು ಸಮಯದಲ್ಲಿ ಅಲಾರಂ ಗಂಟೆ ಒತ್ತುವಂತೆ ಅವಕಾಶ ಕಲ್ಪಿಸಬೇಕು.

## ನಿಯಂತ್ರಣ ಪ್ರಾಧಿಕಾರಿಗಳಿಂದ ಕ್ರಮಗಳು

ಆಗಿಂದಾಗ್ಗೆ ತಮಗೆ ಸಂಬಂಧಪಟ್ಟ ಶಾಖೆಗಳಿಗೆ ಭೇಟಿಕೊಟ್ಟು ಶಾಖೆಗಳು ಕಾಲಕಾಲಕ್ಕೆ ಕಳುಹಿಸಬೇಕಾಗಿದ್ದ ವರದಿಗಳು, ತನಿಖಾ ವರದಿಗಳಿಗೆ ಸಮರ್ಪಕ ಉತ್ತರಗಳನ್ನೂ, ದೂರುಗಳಿಗೆ ತಕ್ಕ ಪರಿಹಾರ ಕೊಡಲಾಗಿದೆಯೇ ಎಂಬ ವಿಷಯಗಳನ್ನೂ ಪರಿಶೀಲಿಸುತ್ತಿರಬೇಕು.

ಒಮ್ಮೊಮ್ಮೆ 'ತುರ್ತು ತನಿಖೆಯನ್ನು' ನಡೆಸಬೇಕು. ಮುಖ್ಯವಾದ ಪುಸ್ತಕಗಳನ್ನು ಪರಿಶೀಲಿಸಬೇಕು. ಇದರ ಜೊತೆಗೆ ಈ ಕೆಲವು ಅಂಶಗಳನ್ನು ಪರಿಶೀಲಿಸಬಹುದು :

ಒಂದು ಬ್ಯಾಂಕಿನಲ್ಲಿ ಇಂಥ ವಂಚನೆ ಪ್ರಕರಣ ಬೆಳಕಿಗೆ ಬಂದ ತಕ್ಷಣ ಅಂಥ ಮಾಹಿತಿಯನ್ನು ಇತರ ಎಲ್ಲಾ ಬ್ಯಾಂಕುಗಳಿಗೂ ತಂತಿರ್ಾಗಿ ತಿಳಿಸುವುದು.

ಈಗಾಗಲೇ ಬ್ಯಾಂಕಿನಲ್ಲಿರುವ ತಪಾಸಣೆ ಮತ್ತು ಪರಿವೀಕ್ಷಣೆ ಕಾರ್ಯಗಳನ್ನು ಚುರುಕುಗೊಳಿಸುವುದು ಮತ್ತು ಅವುಗಳ ಕಾಲದ

ಅಂತರವನ್ನು ಕಡಿಮೆ ಮಾಡುವುದು; ಅಂದರೆ 18 ತಿಂಗಳಿಗೊಮ್ಮೆ ಮಾಡಲಾಗುತ್ತಿರುವ ತಪಾಸಣೆ ಮತ್ತು ಪರಿವೀಕ್ಷಣೆಯನ್ನು 10–12 ತಿಂಗಳಿಗೊಮ್ಮೆ ನಡೆಯುವಂತೆ ಏರ್ಪಾಡು ಮಾಡುವುದು.

ಗಣಕಯಂತ್ರಗಳನ್ನು ಅಳವಡಿಸಿಕೊಂಡು ತಪಾಸಣೆ ನಡೆಸುವುದು.

ಈ ಮೇಲ್ಕಂಡ ಕ್ರಮಗಳು ಕೇವಲ ಉದಾಹರಣೆಗಳು ಮಾತ್ರ ಸವಿಸ್ತಾರವಾಗಿ ನಮೂದಿಸಿಲ್ಲ.

**ವಂಚನೆ—ವಿದೇಶಗಳಲ್ಲಿ**

ಇಂತಹ ವಂಚನೆ ಪ್ರಕರಣಗಳು ಕೇವಲ ನಮ್ಮ ದೇಶಕ್ಕೆ ಸೀಮಿತವಾಗಿರುವುದಿಲ್ಲ. ವಿದೇಶದಲ್ಲೂ ಇಂತಹ ಅಥವಾ ಇದಕ್ಕಿಂತ ಹೆಚ್ಚಿನ ಆಧುನಿಕ ರೀತಿಯಲ್ಲಿ ಬ್ಯಾಂಕಿಗೆ ವಂಚನೆ ಮಾಡಿರುವ ಪ್ರಕರಣಗಳನ್ನು ನಾವು ಪತ್ರಿಕೆಗಳಲ್ಲಿ ಓದುತ್ತಿರುತ್ತೇವೆ. ಅಲ್ಲೂ ಸಹ ಅವುಗಳನ್ನು ತಡೆಗಟ್ಟುವ ಕ್ರಮಗಳನ್ನೂ ಹೆಚ್ಚಿನ ಎಚ್ಚರಿಕೆ ಕ್ರಮಗಳನ್ನೂ ವಹಿಸಿದ್ದಾಗ್ಯೂ ಅಂತಹ ಪ್ರಕರಣಗಳನ್ನು ಪೂರ್ಣವಾಗಿ ತೊಡೆದು ಹಾಕಲು ಸಾಧ್ಯವಾಗಿಲ್ಲವೆಂದು ಕಂಡುಬರುತ್ತದೆ. ಇಷ್ಟಾಗಿ, ವಿದೇಶೀ ಬ್ಯಾಂಕುಗಳಲ್ಲಿ ಅತಿ ಹೆಚ್ಚಿನ ಮಟ್ಟದ ಆಧುನೀಕರಣ, ಯಂತ್ರೀಕರಣದ ವ್ಯವಸ್ಥೆಯಿದೆ. ಹಾಗಿದ್ದರೂ ಸಹ ಕಂಪ್ಯೂಟರ್‌ಗಳ ಮುಖಾಂತರವೇ ವಂಚನೆ ಮಾಡಿರುವ ಮತ್ತು ಮಾಡುತ್ತಿರುವ ಪ್ರಕರಣಗಳು ಗಮನಕ್ಕೆ ಬಂದಿವೆ. ಹೀಗೆ ಮಾಡಿರುವ ಒಂದೊಂದು ವಂಚನೆಯ ಮೊತ್ತವೂ ಕೋಟಿಗಟ್ಟಲೆಯಿರುತ್ತದೆ.

**ಉಪಸಂಹಾರ**

ಇಲ್ಲೂ ಈಚೀಚೆಗೆ ಬ್ಯಾಂಕುಗಳಲ್ಲಿ ಆಧುನೀಕರಣ ಗಣಕಯಂತ್ರೀಕರಣವನ್ನು ಅಳವಡಿಸಲಾಗಿದೆ. ಇದರಿಂದ ಕೊಂಚ ಮಟ್ಟಿಗೆ ವಂಚನೆ ಪ್ರಕರಣಗಳನ್ನು ತಡೆಹಿಡಿಯುವುದು ಸಾಧ್ಯವೆಂದು ನಂಬಲಾಗಿದೆ. ಆದರೆ ಎಷ್ಟರಮಟ್ಟಿಗೆ ಸಾಧ್ಯವಾಗಿದೆ ಎಂಬುದು ತಿಳಿಯುವುದಿಲ್ಲ.

ಅತಿ ಹೆಚ್ಚಿನ ಬ್ಯಾಂಕ್ ಖಾತೆಗಳನ್ನು ತಡೆಯುವ ಕ್ರಮವಾಗಿ ಈಗಾಗಲೇ ಕೆಲವು ಖಾಸಗಿರಂಗದ ಬ್ಯಾಂಕುಗಳು ಗ್ರಾಹಕರ ಠೇವಣಿ ಮೊತ್ತದ ಪ್ರಮಾಣವನ್ನು ಹೆಚ್ಚಿಸಿರುವುದನ್ನು ನೋಡುತ್ತಿದ್ದೇವೆ. ಹೀಗೆ ಬೇರೆ ಬ್ಯಾಂಕುಗಳು ಈ ನೀತಿ ಅನುಸರಿಸಿದ ಮಾತ್ರಕ್ಕೆ ಅವ್ಯವಹಾರ ಅಥವಾ ವಂಚನೆಗೆ ಪೂರ್ಣವಾಗಿ ಕಡಿವಾಣ ಹಾಕಲು ಸಾಧ್ಯವೆಂದು ಹೇಳಲಾಗದು. ಈ ರೀತಿ ಮಾಡಿದರೆ ಸಣ್ಣ ಖಾತೆದಾರರಿಗೆ ಬ್ಯಾಂಕುಗಳ ಸೇವೆ ದುರ್ಲಭವಾಗುವುದೊಂದೇ ತತ್‌ಕ್ಷಣದಲ್ಲಿ ಆಗುವ ಪರಿಣಾಮ. ಆದರೆ ಇಂತಹ ವಿಷಯಗಳಲ್ಲಿ ನಿರ್ಧಾರಗಳು ರಿಸರ್ವ್ ಬ್ಯಾಂಕಿಗೆ ಸೇರಿದ್ದಾಗಿರುತ್ತವೆ. ಇತ್ತೀಚಿನ ಬೆಳವಣಿಗೆ ಏನೆಂದರೆ ಎಲ್ಲಾ ಬ್ಯಾಂಕುಗಳಿಗೂ ಅನ್ವಯವಾಗುವಂತೆ ಪ್ರತಿಯೊಬ್ಬ ಹೊಸ ಖಾತೆದಾರನೂ, ಅವನು ಅಕ್ಷರಸ್ಥನಿರಲಿ ಅಥವಾ ಅನಕ್ಷರಸ್ಥನಿರಲಿ, ತಾನು ಖಾತೆ ತೆರೆಯುವಾಗ ಅವನ ಭಾವಚಿತ್ರವನ್ನು ಕಡ್ಡಾಯವಾಗಿ ನೀಡಬೇಕೆಂಬುದು. ಎಲ್ಲಕ್ಕೂ ಮಿಗಿಲಾಗಿ, ಬ್ಯಾಂಕಿನ ಎಲ್ಲಾ ಸಿಬ್ಬಂದಿವರ್ಗ ಮತ್ತು ಅಧಿಕಾರಿವರ್ಗದವರಿಗೆ ಕಡ್ಡಾಯವಾಗಿ ವಿಶೇಷ ಪ್ರಶಿಕ್ಷಣ ನೀಡಿ, ಈ ಜಾಗೃತಿ ಮನೋಭಾವ ಕೇವಲ ಬ್ಯಾಂಕಿನ ಒಂದು ನಿರ್ದಿಷ್ಟ ವಿಭಾಗದ ಕೆಲಸ ಮಾತ್ರ ಆಗಿರದೆ ಅವರುಗಳಿಗೆ ತಾವು ಮಾಡುವ ಪ್ರತಿಯೊಂದು ಕಾರ್ಯದಲ್ಲೂ ಜಾಗೃತ ಮನೋಭಾವ ಉಂಟು ಮಾಡುವಂತೆ ಮಾಡಬೇಕು. ಆಂತರಿಕವಾಗಿ ಬ್ಯಾಂಕಿನ ಸಿಬ್ಬಂದಿ/ಅಧಿಕಾರಿಗಳಿಂದ ನಡೆಯುವ ವಂಚನೆ ಪ್ರಕರಣಗಳನ್ನು ತಡೆಯುವ ನಿಟ್ಟಿನಲ್ಲಿ ಕಾರ್ಮಿಕ ಸಂಘಗಳು ಅಧಿಕಾರಿವರ್ಗದ ಸಂಘ ಸಂಸ್ಥೆಗಳು ತಮ್ಮ ಸದಸ್ಯರಿಗೆಲ್ಲಾ ಆಗಿಂದಾಗ್ಗೆ ತಿಳುವಳಿಕೆ ನೀಡಿ, ಸಾಧ್ಯವಾದಷ್ಟು ಸಹಾಯಮಾಡಬೇಕು. ಈ ಕ್ರಮಗಳಿಂದ ವಂಚನೆ ಪ್ರಕರಣಗಳು ಕಡಿಮೆಯಾಗುತ್ತವೆಯೇನೋ, ಕಾದು ನೋಡಬೇಕಾಗಿದೆ.

ಆದರೆ ಈಚೀಚೆಗೆ ವಂಚನೆ ಪ್ರಕರಣಗಳು ಹೆಚ್ಚುತ್ತಿರುವುದು ಕಂಡುಬರುತ್ತಿದೆಯೆಂದು ಆಗಲೇ ಹೇಳಿದೆವಷ್ಟೆ. ಹಾಗಾಗಿ 'ವಂಚನೆ' ಪ್ರಕರಣಗಳನ್ನು ಬುಡಸಹಿತ ನಿರ್ಮೂಲ ಮಾಡುವುದಂತೂ ಸಾಧ್ಯವಿಲ್ಲವೆಂದು ಕಾಣುತ್ತದೆ. ಏಕೆಂದರೆ, ಮೊದಲಲ್ಲೇ ವಿವರಿಸಿದಂತೆ ಅದು ಒಬ್ಬ ವ್ಯಕ್ತಿಯ ಒಂದು ವರ್ತನೆಯನ್ನು, ಅವನ ಮನೋಚಾಪಲ್ಯವನ್ನು ಅವಲಂಬಿಸಿರುವುದರಿಂದ ಇಂತಹ ಪ್ರಕರಣಗಳನ್ನು ಪೂರ್ಣವಾಗಿ ತಡೆಗಟ್ಟುವುದಂತೂ ಸಾಧ್ಯವಿಲ್ಲವೆಂದು ಕಾಣುತ್ತದೆ. ಆದರೆ ಮುಖ್ಯವಾಗಿ ಬ್ಯಾಂಕಿನ ಎಲ್ಲರೂ, ಸದಾಕಾಲದಲ್ಲಿಯೂ ಜಾಗರೂಕರಾಗಿದ್ದು, ಸಂಬಂಧಪಟ್ಟ ಎಲ್ಲ ಸಿಬ್ಬಂದಿಗಳು, ಅಧಿಕಾರಿಗಳು ಪ್ರಾಮಾಣಿಕರಾಗಿ ವರ್ತಿಸಿದರೆ ಮಾತ್ರ ಇಂತಹ ವಂಚನೆ ಪ್ರಕರಣಗಳು ಕಡಿಮೆಯಾಗಬಹುದು, ಅಷ್ಟೆ. ●

---

**ಚಂದಾದಾರರಲ್ಲಿ**

ನಿಮ್ಮ ವಿಳಾಸದಲ್ಲಿ ಬದಲಾವಣೆಯಾದಾಗ ದಯವಿಟ್ಟು ನಿಮ್ಮ ಹೊಸ ವಿಳಾಸವನ್ನು ನಮಗೆ ತಿಳಿಸಿ.

ಸಮನ್ವಯ ಸಮಿತಿ
ಭಾರತೀಯ ಸ್ಟೇಟ್ ಬ್ಯಾಂಕ್ ಕನ್ನಡ ಸಂಘಗಳು
೨೨ ಜಯಚಾಮರಾಜೇಂದ್ರ ರಸ್ತೆ
ಬೆಂಗಳೂರು ೫೬೦ ೦೦೨

---

# ಬ್ಯಾಂಕುಗಳಲ್ಲಿ ಪ್ರಾದೇಶಿಕ ಭಾಷೆಯ ಬಳಕೆ

**ಗಾಯತ್ರಿ ಎಂ. ರಾವ್**
ಸ್ಟೇಟ್ ಬ್ಯಾಂಕ್ ಇಂಡಿಯ, ಬೆಂಗಳೂರು

ರಾಜ್ಯದೊಳಗಿನ ವ್ಯವಹಾರಗಳಲ್ಲಿ ಪ್ರಾದೇಶಿಕ ಭಾಷೆಗೆ ಪ್ರಥಮ ಆದ್ಯತೆ. ಅನಂತರದ ಸ್ಥಾನ ಹಿಂದಿಯದು, ಇಂಗ್ಲಿಷಿನದು. ಹಿಂದೀತರ ರಾಜ್ಯಗಳಲ್ಲಿ ಇಂಗ್ಲಿಷನ್ನು ಕೂಡಲೇ ಕೈ ಬಿಡುವಂತಿಲ್ಲ. ಇದು ಭಾರತ ಸ್ವೀಕರಿಸಿರುವ ತ್ರಿಭಾಷಾ ಸೂತ್ರ. ಆದರೆ ಪ್ರಾದೇಶಿಕ ಭಾಷೆಯನ್ನು ಸದ್ದಿಲ್ಲದೆ ಕೈಬಿಡುವ ಹುನ್ನಾರು ನಡೆಯುತ್ತಿದೆ. ಇದು ದುರದೃಷ್ಟಕರ.

ನಮ್ಮ ಸಂವಿಧಾನದ ತ್ರಿಭಾಷಾ ಸೂತ್ರದ ಪ್ರಕಾರ ಪ್ರಾದೇಶಿಕ ಭಾಷೆಗೆ ಪ್ರಥಮ ಆದ್ಯತೆ ಕೊಡಬೇಕು. ನಮ್ಮ ಸಂವಿಧಾನದ ಹದಿನೇಳನೆ ಭಾಗ, ಕೇಂದ್ರ ಹಾಗೂ ರಾಜ್ಯಗಳ ಅಧಿಕೃತ ಭಾಷೆಗಳಿಗೆ ಸಂಬಂಧಪಟ್ಟದ್ದಾಗಿದೆ. ಇಲ್ಲಿರುವ ಎರಡು ಅಧ್ಯಾಯಗಳಲ್ಲಿ ಒಂದು ಅಧ್ಯಾಯ ಒಕ್ಕೂಟದ ಅಧಿಕೃತ ಭಾಷೆಯ ವಿಚಾರಕ್ಕೂ ಇನ್ನೊಂದು ಅಧ್ಯಾಯ ರಾಜ್ಯದ ಅಧಿಕೃತ ಭಾಷೆಗಳ ವಿಚಾರಕ್ಕೂ ವಿಶಾಸಲಾಗಿವೆ. ಮೊದಲನೆ ಅಧ್ಯಾಯದಲ್ಲಿ ಒಕ್ಕೂಟದ ಅಧಿಕೃತ ಭಾಷೆಯನ್ನು ತಿಳಿಸುವ ಎರಡು ಅನುಚ್ಛೇದಗಳಿವೆ (ಅವು 343 ಮತ್ತು 344). ಎರಡನೇ ಅಧ್ಯಾಯದಲ್ಲಿ ಪ್ರಾದೇಶಿಕ ಭಾಷೆಗಳ ವಿಚಾರ 345, 346 ಮತ್ತು 347ನೇ ಅನುಚ್ಛೇದಗಳು ಉಪಬಂಧಗಳಿಗೆ ಒಳಪಟ್ಟು, ಒಂದು ರಾಜ್ಯದ ವಿಧಾನ ಮಂಡಲವು ಕಾನೂನಿನ ಮೂಲಕ ಆ ರಾಜ್ಯದಲ್ಲಿ ಉಪಯೋಗದಲ್ಲಿರುವ ಯಾವುದೇ ಒಂದು ಅಥವಾ ಹೆಚ್ಚಿನ ಭಾಷೆಯನ್ನು ಯಾವುದೇ ಅಧಿಕೃತ ಉದ್ದೇಶಕ್ಕೆ ಉಪಯೋಗಿಸುವ ಭಾಷೆ ಅಥವಾ ಭಾಷೆಗಳಾಗಿ ಅಂಗೀಕರಿಸಬಹುದು ಎಂದು ಹೇಳಲಾಗಿದೆ. ಆದ್ದರಿಂದ ಒಕ್ಕೂಟದ ಅಧಿಕೃತ ಭಾಷೆ ಹಿಂದಿಯಾದರೆ, ರಾಜ್ಯದ ಅಧಿಕೃತ ಭಾಷೆ ಆ ರಾಜ್ಯದ ವಿಧಾನ ಮಂಡಲ ಹಾಗೆಂದು ಸ್ವೀಕರಿಸುವ ಭಾಷೆ. ಆದ್ದರಿಂದ ಜನ ಆಡುವ ಭಾಷೆಯಲ್ಲೇ ಎಲ್ಲಾ ವ್ಯವಹಾರಗಳನ್ನೂ ನಡೆಸುವುದರಿಂದ ಮಾತ್ರವೇ ಜನತಂತ್ರಕ್ಕೆ ಅರ್ಥವಿದೆ.

ಬ್ಯಾಂಕುಗಳು ಅಂತರರಾಷ್ಟ್ರೀಯ ಸಂಪರ್ಕ ಹೊಂದಿದ ಸಂಸ್ಥೆಗಳು. ಅವು ನಡೆಸುವ ವ್ಯವಹಾರಗಳು ಯಾವುದೇ ಭಾಷಾ ಪ್ರದೇಶಕ್ಕೆ ಸೀಮಿತವಲ್ಲ. ನಮ್ಮ ಬಹುತೇಕ ಬ್ಯಾಂಕುಗಳು ರಾಷ್ಟ್ರವ್ಯಾಪಿ ಸಂಸ್ಥೆಗಳು. ಅವುಗಳ ಶಾಖಾ ಜಾಲಗಳು ರಾಷ್ಟ್ರದ ಎಲ್ಲೆಡೆಗೂ ವ್ಯಾಪಿಸಿವೆ. ಹಲವು ಬ್ಯಾಂಕುಗಳು ವಿದೇಶಗಳಲ್ಲೂ ಶಾಖೆಗಳನ್ನು ಹೊಂದಿವೆ. ಆದ್ದರಿಂದ ಅವು ಯಾವುದೊಂದು ಭಾಷೆಗೇ ಆಗಲಿ ಕಟ್ಟು ಬೀಳುವುದು ಸಾಧ್ಯವಾಗದು.

ಅಂತರರಾಷ್ಟ್ರೀಯ ಸ್ವರೂಪದ ಬ್ಯಾಂಕುಗಳ ವ್ಯವಹಾರಕ್ಕೆ ಅಂತರರಾಷ್ಟ್ರೀಯ ಭಾಷೆಯಾದ ಇಂಗ್ಲಿಷನ್ನು ಬಳಸುವುದು ಅನುಕೂಲಕರ. ಹಿಂದಿಯನ್ನು ಭಾರತ ಒಕ್ಕೂಟದ ಅಧಿಕೃತ ಭಾಷೆ ಅಥವಾ ರಾಜಭಾಷೆ ಎಂದು ಸಂವಿಧಾನದಲ್ಲಿ ಸ್ವೀಕರಿಸಿದರೆ, ರಾಜ್ಯದ ಪ್ರಾದೇಶಿಕ ಭಾಷೆಯನ್ನು ಆ ರಾಜ್ಯದ ಅಧಿಕೃತ ಭಾಷೆಯಾಗಿ ಪರಿಗಣಿಸಲಾಗಿದೆ.

ಇಡೀ ರಾಷ್ಟ್ರಕ್ಕೆ ಅನ್ವಯಿಸುವಂತೆ ಕೇಂದ್ರಸರ್ಕಾರ ತ್ರಿಭಾಷಾ ಸೂತ್ರವನ್ನು ಒಪ್ಪಿಕೊಂಡಿದೆ. ಅದರಂತೆ ಪ್ರಾದೇಶಿಕ ಭಾಷೆ ಮೊದಲು, ಅನಂತರ ಹಿಂದಿ, ಅನಂತರ ಇಂಗ್ಲಿಷ್ ಇರಬೇಕು. ಇಲ್ಲಿ ಮುಖ್ಯವಾಗಿ ನಾವು ಗಮನಿಸಬೇಕಾದ ಅಂಶ ಏನೆಂದರೆ ಬ್ಯಾಂಕಿಗೂ, ಜನಸಾಮಾನ್ಯನಿಗೂ ಸಂವಹನ ಆಗಬೇಕಾದರೆ ಗ್ರಾಹಕನು ಬ್ಯಾಂಕಿನ ಪ್ರತಿಯೊಂದು ವ್ಯವಹಾರವನ್ನೂ ಅರ್ಥ ಮಾಡಿಕೊಂಡು ಅದಕ್ಕೆ ಸಹಿ ಮಾಡುವುದು. ಅದು ಪ್ರಾದೇಶಿಕ ಭಾಷೆಯಲ್ಲಿದ್ದರೆ ಮಾತ್ರ ಸಾಧ್ಯ.

ನಾವು ಜನರ ಸಮೀಪಕ್ಕೆ ತಲುಪಲು ಅವರ ಜತೆ ಅವರದೇ ಆದ ಭಾಷೆಯಲ್ಲಿ ವ್ಯವಹರಿಸುವುದು ಅಗತ್ಯ. ಈಗಿರುವ ಇಂಗ್ಲಿಷ್ ಭಾಷೆ ಅಗತ್ಯಕ್ಕೆ ತಕ್ಕಷ್ಟು ಇರಬೇಕು. ರಾಷ್ಟ್ರಭಾಷೆಯಾದ ಹಿಂದಿ ಅನ್ಯ ರಾಜ್ಯಗಳ ಜತೆ ವ್ಯವಹರಿಸಲು ಬೇಕು. ಆದರೆ ನಮ್ಮ ಸ್ಥಳೀಯ ಗ್ರಾಹಕರ ಜತೆ ನಮ್ಮ ಪ್ರಾದೇಶಿಕ ಭಾಷೆಯಲ್ಲಿ ವ್ಯವಹರಿಸಿದರೆ ಜನತೆಯ ವಿಶ್ವಾಸ ಇಮ್ಮಡಿಗೊಳಿಸುವುದರಲ್ಲಿ ಸಂದೇಹವೇ ಇಲ್ಲ. ಬ್ಯಾಂಕು ಬೆಳೆಯಬೇಕು. ಜತೆಗೆ ಪ್ರತಿ ಪ್ರಾದೇಶಿಕ ಭಾಷೆಯೂ ಉಳಿಯಬೇಕು ಮತ್ತು ಬೆಳೆಯಬೇಕು. ಇದು ಎಲ್ಲಾ ಬ್ಯಾಂಕುಗಳ ಆಸೆ ಮತ್ತು ಗುರಿಯಾಗಬೇಕು.

ಪ್ರಾಚಾರ್ಯ ಎಚ್ಚೆಸ್ಕೆಯವರು ಹೇಳಿದಂತೆ ಬ್ಯಾಂಕಿನ ಶಾಖೆಗಳು ಜನರು ಆಡುವ ಭಾಷೆಯಲ್ಲೇ ವ್ಯವಹರಿಸಿದರೆ ಅನುಕೂಲ. ಜನಸಾಮಾನ್ಯರ ವಿಶ್ವಾಸ ಗಳಿಸಬೇಕಾದರೆ ಅವರಿಗೆ ಅರ್ಥವಾಗುವ ಭಾಷೆಯಲ್ಲೇ ವ್ಯವಹಾರ ನಡೆಸುವುದು ಅಗತ್ಯ. ಬ್ಯಾಂಕುಗಳು ಜನಸಾಮಾನ್ಯರ ಸೇವೆಗಾಗಿಯೇ ಮೀಸಲಾಗಿರುವುದರಿಂದ ಜನರು ಆಡುವ ಭಾಷೆಯಲ್ಲಿ ವ್ಯವಹರಿಸಿದರೆ ಉತ್ತಮ.

ಆಡಳಿತ ಭಾಷೆಯಾಗಿ ಪ್ರಾದೇಶಿಕ ಭಾಷೆ ಹೆಚ್ಚು

ಪರಿಣಾಮಕಾರಿಯಾಗಬೇಕಾದ್ದು ಅಗತ್ಯ. ಆದ್ದರಿಂದ ರಾಜ್ಯದ ಎಲ್ಲಾ ಬ್ಯಾಂಕುಗಳು ಮತ್ತು ಸಹಕಾರ ಸಂಘ ಸಂಸ್ಥೆಗಳು ಪ್ರಾದೇಶಿಕ ಭಾಷೆಯನ್ನು ಇನ್ನೂ ಹೆಚ್ಚು ವ್ಯಾಪಕವಾಗಿ ಬಳಕೆಗೆ ತರಲು ಈ ಅಂಶಗಳನ್ನು ಕಾರ್ಯಗತಗೊಳಿಸಬೇಕು :

1 ಬ್ಯಾಂಕಿನ ದೈನಂದಿನ ಬಳಕೆಯ ನಮೂನೆಗಳು, ಖಾತೆ ಪುಸ್ತಕಗಳು, ತಿಳಿವಳಿಕೆಗಳು—ಇವೆಲ್ಲವೂ ಪ್ರಾದೇಶಿಕ ಭಾಷೆಯಲ್ಲೇ ಇರಬೇಕು.

2 ಚಲನ್, ಚೆಕ್, ನಿಧಿ ಪ್ರಮಾಣ ಪತ್ರಗಳು, ಪಾಸ್‌ಬುಕ್–ಇತ್ಯಾದಿಗಳನ್ನು ಪ್ರಾದೇಶಿಕ ಭಾಷೆಯಲ್ಲೇ ಬಳಸಬೇಕು.

3 ಸರ್ಕಾರದೊಡನೆ ಮತ್ತು ಸಾರ್ವಜನಿಕರೊಡನೆ ನಡೆಸುವ ಸಂಪೂರ್ಣ ಪತ್ರ ವ್ಯವಹಾರವೂ ಪ್ರಾದೇಶಿಕ ಭಾಷೆಯಲ್ಲಿರಬೇಕು.

4 ಬ್ಯಾಂಕಿನ, ಸಹಕಾರ ಸಂಘ ಸಂಸ್ಥೆಗಳ ಎಲ್ಲಾ ಸಿಬ್ಬಂದಿ ವರ್ಗದವರಿಗೆ ಪ್ರಾದೇಶಿಕ ಭಾಷೆಯನ್ನು ನಿರರ್ಗಳವಾಗಿ ಓದಲು, ಬರೆಯಲು, ಮಾತಾಡಲು ಮತ್ತು ಪತ್ರವ್ಯವಹಾರ ನಡೆಸಲು ಬರಬೇಕು.

5 ಬ್ಯಾಂಕುಗಳು ಸಂಸ್ಥೆಗಳ ಆಡಳಿತ ಮಂಡಳಿಗಳು ಪ್ರಾದೇಶಿಕ ಭಾಷೆಯ ಬಳಕೆಯನ್ನು ನಿಷ್ಠೆಯಿಂದ ಅನುಷ್ಠಾನಗೊಳಿಸಬೇಕು.

ರಾಜ್ಯದಲ್ಲಿ ಕೆಲಸ ಮಾಡುವ ವಾಣಿಜ್ಯ ಬ್ಯಾಂಕುಗಳು ರಾಷ್ಟ್ರವ್ಯಾಪಿಯಾಗಿದ್ದರೂ, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು ಸ್ಥಳೀಯ ವ್ಯಾಪ್ತಿ ಉಳ್ಳಂಥವು. ಭೂ ಬ್ಯಾಂಕ್, ರಾಜ್ಯ ಹಣಕಾಸು ನಿಗಮ—ಇವು ಆಯಾ ರಾಜ್ಯಕ್ಕೇ ಸೀಮಿತವಾದವು. ಇವೆಲ್ಲಾ ಪ್ರಾದೇಶಿಕ ಭಾಷೆಯಲ್ಲೇ ಸಂಪೂರ್ಣವಾಗಿ ವ್ಯವಹಾರ ನಡೆಸುವುದರ ಜತೆಗೆ ಎಲ್ಲಾ ಲೆಕ್ಕ ಪತ್ರಗಳನ್ನೂ ಪ್ರಾದೇಶಿಕ ಭಾಷೆಯಲ್ಲೇ ಇಡಬಹುದು. ರಾಜ್ಯ ಸರ್ಕಾರ ಈ ಸಂಸ್ಥೆಗಳೊಂದಿಗೆ ತನ್ನ ಎಲ್ಲಾ ವ್ಯವಹಾರವನ್ನೂ ಪ್ರಾದೇಶಿಕ ಭಾಷೆಯಲ್ಲೇ ನಡೆಸಿದರೆ, ಪ್ರಾದೇಶಿಕ ಭಾಷೆಯಲ್ಲೇ ಉತ್ತರ ಬಯಸಿದರೆ ಆಗ ಪ್ರಾದೇಶಿಕ ಭಾಷೆ ಆಯಾ ರಾಜ್ಯದಲ್ಲಿ ತನ್ನ ನ್ಯಾಯವಾದ ಹಾಗೂ ಸಹಜವಾದ ಸ್ಥಾನ ಪಡೆದುಕೊಂಡಂತಾಗುತ್ತದೆ. ಪ್ರಾದೇಶಿಕ ಭಾಷೆಯಲ್ಲದೆ ಬೇರೆ ಯಾವುದೇ ಭಾಷೆಯೂ ಗೊತ್ತಿಲ್ಲದ ಬಹು ಸಂಖ್ಯೆಯ ಜನಕ್ಕೆ ಉಪಕಾರ ಮಾಡಿದಂತಾಗುತ್ತದೆ.

ಹಾಗೆಯೇ ನಮ್ಮ ಕನ್ನಡನಾಡಿನ ಜನರ ನುಡಿಯಾದ ಕನ್ನಡವೂ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಬೆಳೆಯಬೇಕು. ಈ ದಿಸೆಯಲ್ಲಿ ಭಾರತೀಯ ಸ್ಟೇಟ್ ಬ್ಯಾಂಕ್ ಹೆಚ್ಚಿನ ಪ್ರಗತಿ ಸಾಧಿಸಿದೆ ಎಂದರೆ ತಪ್ಪಲ್ಲ. ಅಲ್ಲಿ ಉಪಯೋಗಿಸುವ ಎಲ್ಲಾ ನಮೂನೆಗಳೂ ಕನ್ನಡ, ಹಿಂದಿ ಮತ್ತು ಇಂಗ್ಲಿಷಿನಲ್ಲಿರುತ್ತವೆ. ಈ ಬ್ಯಾಂಕಿನ ಕನ್ನಡ ಸಂಘಗಳು ಸೇರಿ ಸಮನ್ವಯ ಸಮಿತಿ ರಚಿಸಿಕೊಂಡು ಅದರ ಮತಿಯಿಂದ ಬ್ಯಾಂಕಿಂಗ್ ಪ್ರಪಂಚ ಎಂಬ ಕನ್ನಡ ತ್ರೈಮಾಸಿಕ ಪತ್ರಿಕೆಯೊಂದನ್ನು ಪ್ರಕಟಿಸುತ್ತಿದೆ. ಇದಲ್ಲದೆ ಬ್ಯಾಂಕಿಂಗ್ ನಿಘಂಟು ಎಂಬ ಬ್ಯಾಂಕಿಂಗ್ ಶಬ್ದಕೋಶವನ್ನು ಪ್ರಕಟಿಸಿದೆ. ಭಾರತೀಯ ಸ್ಟೇಟ್ ಬ್ಯಾಂಕ್, ಅಧಿಕೃತ ಭಾಷಾ ವಿಭಾಗ, ಸುಮಾರು ಹತ್ತು ಸಾವಿರ ಪದಗಳುಳ್ಳ ಬ್ಯಾಂಕಿಂಗ್ ಶಬ್ದಾವಳಿ(ತ್ರಿಭಾಷಾ)ಯನ್ನು ಹೊರ ತಂದಿದೆ.

ರಾಜ್ಯ ಸರ್ಕಾರ ಒಪ್ಪಿಕೊಂಡಿರುವ ತ್ರಿಭಾಷಾ ಸೂತ್ರವನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದರೆ ಮಾತ್ರ ಪ್ರಾದೇಶಿಕ ಭಾಷೆಯ ಏಳಿಗೆಗೆ ಅನುಕೂಲವಾಗುತ್ತದೆ. ಸರ್ಕಾರ ಇದರ ಬಗ್ಗೆ ಗಮನ ಕೊಟ್ಟು ತ್ರಿಭಾಷಾ ಸೂತ್ರ ಬ್ಯಾಂಕುಗಳಲ್ಲಿ ಸರಿಯಾಗಿ ಜಾರಿ ಆಗುತ್ತಿದೆಯೇ ಎಂಬುದನ್ನು ಪರಿಶೀಲಿಸಬೇಕು. ಆಗ ಮಾತ್ರ ರಾಜ್ಯ ಭಾಷೆಗೆ ತಕ್ಕ ಮನ್ನಣೆ ಸಿಗುತ್ತದೆ. ರಾಜ್ಯ ಸರ್ಕಾರ ಈ ಮುಂದಿನ ಕಾರ್ಯಕ್ರಮ ಜಾರಿಗೆ ತಂದರೆ ಮಾತ್ರ ಬ್ಯಾಂಕುಗಳಲ್ಲಿ ರಾಜ್ಯ ಭಾಷೆಯ ಬಳಕೆ ಸುಲಭವಾಗಿ ಆಗುವುದರಲ್ಲಿ ಸಂಶಯವಿಲ್ಲ :

ಬ್ಯಾಂಕುಗಳ ಅಧಿಕೃತ ಭಾಷಾ ವಿಭಾಗದಲ್ಲಿ ಹಿಂದಿ ಅಧಿಕಾರಿಗಳು ಇರುವಂತೆ ರಾಜ್ಯಭಾಷಾ ಜ್ಞಾನವಿರುವ ಭಾಷಾಧಿಕಾರಿಗಳನ್ನು ನೇಮಕ ಮಾಡಬೇಕು. ರಾಜ್ಯಭಾಷೆ ಬಾರದ ಅಧಿಕಾರಿಗಳಿಗೆ, ಸಿಬ್ಬಂದಿ ವರ್ಗದವರಿಗೆ ರಾಜ್ಯಭಾಷೆ ಕಲಿಸಲು ಕಛೇರಿ ವೇಳೆಯಲ್ಲಿ ತರಗತಿ ನಡೆಸಬೇಕು. ದಿನನಿತ್ಯ ಬಳಕೆಯ ನಮೂನೆಯನ್ನು (ಫಾರಂ ಅನ್ನು) ಪ್ರಾದೇಶಿಕ ಭಾಷೆ, ಹಿಂದಿ, ಇಂಗ್ಲಿಷ್‌ನಲ್ಲಿ ಮುದ್ರಿಸಬೇಕು. ಎಲ್ಲಾ ನಮೂನೆಗಳೂ ತ್ರಿಭಾಷೆಯಲ್ಲಿ ಮುದ್ರಿತವಾಗಲೇಬೇಕು.

—ರಾಜ್ಯಭಾಷೆ ಬಾರದ ಅಧಿಕಾರಿಗಳಿಗೆ, ಸಿಬ್ಬಂದಿಗಳಿಗೆ ರಾಜ್ಯಭಾಷೆ ತರಗತಿಯನ್ನು ನಡೆಸಿ, ಅವರು ಭಾಷಾ ಜ್ಞಾನವನ್ನು ಬೆಳೆಸಿಕೊಳ್ಳುವಂತೆ, ಮಾಡಬೇಕು.

—ಬ್ಯಾಂಕಿನ ಕಛೇರಿಯಿಂದ ಹೊರಡುವ ಎಲ್ಲಾ ಸುತ್ತೋಲೆಗಳ ಪ್ರಾದೇಶಿಕ ಭಾಷೆಯಲ್ಲೂ ಇರಬೇಕು.

—ಬ್ಯಾಂಕಿನ ಎಲ್ಲಾ ಭಿತ್ತಿ ಪತ್ರಗಳು ಪ್ರಾದೇಶಿಕ ಭಾಷೆಯಲ್ಲೂ ಇರತಕ್ಕದ್ದು.

—ಎಲ್ಲಾ ಪ್ರಧಾನ ಕಛೇರಿಗಳಲ್ಲಿ, ವಲಯ ಕಛೇರಿಗಳಲ್ಲಿ ಪ್ರಾದೇಶಿಕ ಭಾಷೆಯ ಬಳಕೆ ಹೇಗೆ ಆಗುತ್ತಿದೆ ಎಂಬುದನ್ನು ತಿಳಿಯಲು ಮೂರು ತಿಂಗಳಿಗೊಮ್ಮೆ ಸಭೆ ನಡೆಸಬೇಕು.

—ಎಲ್ಲಾ ಶಾಖೆಗಳಿಂದ ಎಲ್ಲಾ ಮಾಹಿತಿಗಳನ್ನು ಪಡೆಯಬೇಕು.

ಒಕ್ಕೂಟ ಭಾಷೆಯ ಬಗ್ಗೆ ಎಲ್ಲರೂ ಚಿಂತನೆ ಮತ್ತು ಎಲ್ಲ ಕ್ರಮ ತೆಗೆದುಕೊಳ್ಳುವ ಕಾತರವಿರುವಂತೆ, ಪ್ರಾದೇಶಿಕ ಭಾಷೆಗಳಿಗೂ ಸರಿಯಾದ ಸ್ಥಾನಮಾನಗಳನ್ನು ಕೊಟ್ಟರೆ, ರಾಜ್ಯ ಭಾಷೆಗಳಿಗೆ ಯಾವ ತೊಂದರೆಯೂ ಇಲ್ಲ ಎಂದು ನನ್ನ ಭಾವನೆ. ಇವೆಲ್ಲವನ್ನೂ ಸರಿಯಾಗಿ ಸರ್ಕಾರ, ರಾಜ್ಯಭಾಷಾ ಅಭಿವೃದ್ಧಿ ಪ್ರಾಧಿಕಾರ ಪರಿಶೀಲಿಸಿ ಸೂಕ್ತ ಕ್ರಮವನ್ನು ತೆಗೆದುಕೊಳ್ಳಬೇಕು. ಆದ್ದರಿಂದ ಇಂಗ್ಲಿಷ್ ಮತ್ತು ಕೇಂದ್ರ ಸರ್ಕಾರದ ಭಾಷಾ ನೀತಿಯಡಿಯ ಹಿಂದಿ—ಇವುಗಳ ಜತೆಗೆ ಪ್ರಾದೇಶಿಕ ಭಾಷೆಯ ಬಳಕೆ ಗ್ರಾಹಕ ಸೇವೆಗೆ ಅತ್ಯಗತ್ಯ ಎಂದು ನನ್ನ ಅಭಿಪ್ರಾಯ. ●

# ಸ್ಪರ್ಧೆಯ ಯುಗದಲ್ಲಿ ಬದಲಾಗಬೇಕಾದ ಭಾರತೀಯ ಬ್ಯಾಂಕುಗಳ ಆಡಳಿತ ವಿಧಾನ

**ಹೆಚ್. ವಿ. ಸುಬ್ರಮಣ್ಯ**

ಭಾರತೀಯ ಸ್ಟೇಟ್ ಬ್ಯಾಂಕ್, ಕೃ. ಅ. ಶಾಖೆ, ಮೂಡಿಗೆರೆ

ಬ್ಯಾಂಕಿಂಗ್ ಸದಾ ಬೆಳೆಯುತ್ತಿರುವ, ದೇಶವನ್ನು ಪ್ರಗತಿಪಥದತ್ತ ಒಯ್ಯುವ ಒಂದು ಪ್ರಮುಖ ಮಾಧ್ಯಮ. ಈ ಮಾಧ್ಯಮದಲ್ಲಿ ಕೆಲಸಗಳು ಸುಗಮವಾಗಿ, ಸುಲಲಿತವಾಗಿ ನಡೆಯಬೇಕಾದರೆ, ಅದರ ಆಡಳಿತ ವಿಧಾನ ಸರಳವೂ, ಕ್ಷಿಪ್ರಗತಿಯದೂ ಆಗಿರಬೇಕಾದುದು ಅಗತ್ಯ.

ಮುಕ್ತ ಆರ್ಥಿಕ ನೀತಿಯನ್ನು ಪ್ರತಿಪಾದಿಸುತ್ತಿರುವ ಪ್ರಸ್ತುತ ಭಾರತದಲ್ಲಿ ಹಲವಾರು ಖಾಸಗಿ ಹಾಗೂ ವಿದೇಶೀ ಬ್ಯಾಂಕುಗಳು ಪ್ರಾರಂಭವಾಗಿ, ತಮ್ಮ ಶಾಖೆಗಳನ್ನು ತೆರೆದು ತ್ವರಿತಗತಿಯಲ್ಲಿ ಬೆಳೆಯುತ್ತಿರುವ ಹಿನ್ನೆಲೆಯಲ್ಲಿ, ನಮ್ಮ ಇಂದಿನ ಆಡಳಿತ ವಿಧಾನದಿಂದ ಈ ಬೆಳವಣಿಗೆಯನ್ನು ಎದುರಿಸಿ, ಅದಕ್ಕೆ ಸರಿಸಾಟಿಯಾದ ಅಭಿವೃದ್ಧಿಯನ್ನು ಸಾಧಿಸಲು ಅನುಕೂಲಕರವಾಗಿಲ್ಲ.

ಯಾವುದೇ ಕೆಲಸವಾಗಬೇಕಾದರೂ ಹಲವಾರು ಅಡೆತಡೆಗಳನ್ನು ಎದುರಿಸಬೇಕಾದ, ಹತ್ತಾರು ಅಧಿಕಾರಿಗಳ ಮರ್ಜಿಯನ್ನು ಅವಲಂಬಿಸಬೇಕಾಗಿರುವ ಇಂದಿನ ಭಾರತೀಯ ಬ್ಯಾಂಕುಗಳ ಆಡಳಿತ ವಿಧಾನ "ದ್ರಾವಿಡ ಪ್ರಾಣಾಯಾಮ"ದಂತೆ ಸುತ್ತು ಬಳಸಿನ ಕ್ರಿಯೆಯಾಗಿ, ಗ್ರಾಹಕರು ಬಸವಳಿದು ಈ ಬ್ಯಾಂಕುಗಳ ಸಹವಾಸವೇ ಬೇಡ ಎನ್ನುವ ಹಂತ ತಲುಪಿ, ಇದರಿಂದಾಗಿ ಭಾರತೀಯ ಬ್ಯಾಂಕುಗಳು ತತ್ತರಿಸುತ್ತಿವೆ.

ಖಾಸಗಿ ಹಾಗೂ ವಿದೇಶೀ ಬ್ಯಾಂಕುಗಳ ಏಳಿಗೆ ನೋಡಿದಾಗ ನಮ್ಮ ಭಾರತೀಯ ಬ್ಯಾಂಕುಗಳ ಭವಿಷ್ಯದಲ್ಲಿ ಎದುರಿಸಬೇಕಾದ ಸಮಸ್ಯೆಗಳು ಹಾಗೂ ಅಪಾಯಗಳ ಸ್ಪಷ್ಟ ಮುನ್ಸೂಚನೆ ಕಾಣಿಸುತ್ತಿದೆ. ತ್ವರಿತ ಹಾಗೂ ಶಿಸ್ತಿನ ಸೇವೆ ನೀಡುತ್ತಿರುವ ವಿದೇಶೀ ಮತ್ತು ಹೊಸ ಖಾಸಗಿ ಬ್ಯಾಂಕುಗಳಲ್ಲಿ ಆಡಳಿತ ರಚನೆ ಅತ್ಯಂತ ಸರಳವಾಗಿರುವುದು ಕಾರಣವಾಗಿದೆ.

ತುರ್ತು ಅಗತ್ಯಗಳ ದೊಡ್ಡ ಪ್ರಮಾಣದ ಬಂಡವಾಳ ಹೂಡಿಕೆಯನ್ನು ಬಯಸುವ ಹಲವು ಉದ್ದಿಮೆಗಳನ್ನು ಆರಂಭಿಸಲು ಇಚ್ಛಿಸುವವರಿಗೆ ನಮ್ಮ ಭಾರತೀಯ ಬ್ಯಾಂಕುಗಳ ಆಡಳಿತ ರಚನೆಯಿಂದಾಗಿ ಹಲವಾರು ಅಡೆತಡೆಗಳು, ವಿಳಂಬಗಳನ್ನೆದುರಿಸಬೇಕಾಗುತ್ತದೆ. ಅನಗತ್ಯ ವಿಳಂಬದಿಂದಾಗಿ ನಷ್ಟವಾಗುವ ಸಂಭವವೇ ಹೆಚ್ಚು. ಹೀಗೆ ವಿಳಂಬ ನೀತಿಯಿಂದಾಗಿ ಗ್ರಾಹಕನಿಗೆ ಸರಿಯಾದ ಸಮಯಕ್ಕೆ ನೆರವು ಸಿಗದೆ "ವಿಳಂಬವಾಗಿ ದೊರೆವ ನ್ಯಾಯವು ನ್ಯಾಯವನ್ನು ನಿರಾಕರಿಸಿದಂತೆ" ಎನ್ನುವಂತಾಗಿ, ನೆರವಿನ ಪ್ರಯೋಜನ ಸರಿಯಾಗಿ ಉಂಟಾಗದು.

ವಿದೇಶೀ ಮತ್ತು ಹೊಸ ಖಾಸಗಿ ಬ್ಯಾಂಕುಗಳು ಭಾರತದ ಜನಸಾಮಾನ್ಯರ ಕೈಗೆ ಎಟುಕುವಂತಿರದಿದ್ದರೂ, ಶ್ರೀಮಂತ ವರ್ಗ ಹಾಗೂ ಬೃಹತ್ ಉದ್ದಿಮೆದಾರರಿಗಾಗಿಯೇ ಇವೆ. ಈ ಬ್ಯಾಂಕುಗಳು ತಮ್ಮ ಸೇವೆಗಳನ್ನು ಬೃಹತ್ ನಗರಗಳಿಗೆ ಮಾತ್ರ ಸೀಮಿತಗೊಳಿಸಿವೆ. ಇಂತಹ ನಗರಗಳಲ್ಲಿ ಯಾವುದೇ ಉದ್ದಿಮೆಯಾದರೂ ಹೆಚ್ಚು ಲಾಭ ಗಳಿಸಲು ಸಾಧ್ಯ.

ಆದರೆ ಹಳ್ಳಿಗಳೇ ಪ್ರಮುಖವಾಗಿರುವ ನಮ್ಮ ದೇಶದಲ್ಲಿ, ಭಾರತೀಯ ಬ್ಯಾಂಕುಗಳು ತಮ್ಮ ಸೇವೆಯನ್ನು ನಗರಗಳಿಗೆ ಮಾತ್ರ ಮೀಸಲಾಗಿರಿಸುವುದು ಸಾಧ್ಯವಿಲ್ಲ ಹಾಗೂ ಅದು ಸಾಧುವಾದುದೂ ಅಲ್ಲ. ಹೀಗಿರುವಾಗ ಅವು ಪ್ರತಿ ಹಳ್ಳಿಗೂ ತಮ್ಮ ಶಾಖೆಗಳ ಮೂಲಕ ಸೇವೆ ನೀಡಬೇಕಾಗಿದೆ. ಹಳ್ಳಿಗಳಲ್ಲಿ ಲಾಭದ ವ್ಯವಹಾರ ಸಾಧ್ಯವಿಲ್ಲ. ಇಂತಹ ಸಮಸ್ಯೆಗಳಿದ್ದರೂ ತಮ್ಮ ನಗರ ಶಾಖೆಗಳ ಮೂಲಕ ಸಮರ್ಥವಾಗಿ ವಿದೇಶೀ ಹಾಗೂ ಹೊಸ ಖಾಸಗಿ ಬ್ಯಾಂಕುಗಳ ಸವಾಲನ್ನು ಎದುರಿಸಬೇಕು. ಇದಕ್ಕೆ ಸರಳವೂ, ಸುಲಲಿತವೂ ಆದ ಆಡಳಿತ ರಚನೆ ಇರಬೇಕಾದುದು ಮುಖ್ಯ

ವಿವಿಧ ಸ್ತರಗಳ ಆಡಳಿತ ವಿಧಾನದಿಂದಾಗಿ ಕೆಲಸ ಕಾರ್ಯಗಳು ಸುಗಮವಾಗಿ ನಡೆಯಲು ಸಾಧ್ಯವಾಗದು. ದೊಡ್ಡ ಮೊತ್ತದ ಸಾಲ ಮಂಜೂರಾತಿಯ ಸಮಯದಲ್ಲಿ ಶಾಖೆಯಲ್ಲಿನ ಕ್ಷೇತ್ರಾಧಿಕಾರಿಯಿಂದ ವಲಯದ ಮುಖ್ಯಸ್ಥರವರೆಗೆ 7–8 ಹಂತಗಳಲ್ಲಿ ಅರ್ಜಿ ಸುತ್ತಾಡಬೇಕಾಗುತ್ತದೆ ಕೊನೆಯಲ್ಲಿ ಮಂಜೂರಾಗಿ ಬರುವಾಗ ಕನಿಷ್ಠ 2-3 ತಿಂಗಳಾದರೂ ಕಳೆದು ಹೋಗಿರುತ್ತದೆ. ಅದರಲ್ಲೂ ಸಂವಹನ ಸಮಯದಲ್ಲಿ ಯಾವುದೇ ರೀತಿಯ ಭಿನ್ನಾಭಿಪ್ರಾಯಗಳು ತಲೆದೋರಿದರೆ, ಅವು ನಿವಾರಣೆಯಾಗಿ ಕೆಲಸ ಮುಂದುವರೆಯಲು ಮತ್ತೂ ಹೆಚ್ಚು ಸಮಯ ವ್ಯಯವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಪ್ರತಿಯೊರ್ವ ಗ್ರಾಹಕನೂ ಇಷ್ಟೊಂದು ಸಮಯ ಕಾಯಲು ಸಿದ್ಧನಾಗಿರುವುದಿಲ್ಲ. ಹೀಗಿದ್ದಾಗ, ಆ ಗ್ರಾಹಕ ಬೇರೆಡೆ ಹೋಗುವ ಸಾಧ್ಯತೆಯೇ ಹೆಚ್ಚು. ಹೊಸದಾಗಿ ಪ್ರಾರಂಭ

[19ನೇ ಪುಟ ನೋಡಿ

# ಬ್ಯಾಂಕಿಂಗ್ ಹಣಕಾಸು ವಲಯ: ಇತ್ತೀಚಿನ ಬೆಳವಣಿಗೆಗಳು

**ಸಿ. ಆರ್. ಸತೀಶ್ ಚಂದ್ರ**

ಭಾರತೀಯ ಸ್ಟೇಟ್ ಬ್ಯಾಂಕ್, ವಲಯ ಕಛೇರಿ, ಬೆಂಗಳೂರು

**ಪ್ರಾಥಮಿಕ ಸಹಕಾರಿ ಬ್ಯಾಂಕುಗಳ ಹೆಚ್ಚಿನ ಸ್ವಾತಂತ್ರ್ಯ**

ತಾವು ನೀಡುವ ಸಾಲಗಳ ಮೇಲಿನ ಬಡ್ಡಿದರವನ್ನು ನಿರ್ಧರಿಸುವ ಸ್ವಾತಂತ್ರ್ಯವನ್ನು ಪ್ರಾಥಮಿಕ ಸಹಕಾರಿ ಬ್ಯಾಂಕುಗಳು ಪಡೆದು ಕೊಂಡಿವೆ. ಈ ಬಗ್ಗೆ ರಿಸರ್ವ್ ಬ್ಯಾಂಕ್ ಆದೇಶವೊಂದನ್ನು ಹೊರಡಿಸಿದ್ದು, ಇನ್ನು ಮುಂದೆ (ಜೂನ್ 21ರಿಂದ) 25 ಸಾವಿರ ಕ್ಕಿಂತ ಹೆಚ್ಚಿನ ಮೊತ್ತದ ಸಾಲಗಳ ಮೇಲಿನ ಬಡ್ಡಿದರವನ್ನು ಆಯಾ ಬ್ಯಾಂಕುಗಳೇ ನಿರ್ಧರಿಸಲಿವೆ. ಆದರೆ ಕನಿಷ್ಠ ಬಡ್ಡಿದರ ಶೇ. 13ಕ್ಕಿಂತ ಕಡಿಮೆ ಇರಬಾರದೆಂದು ರಿಸರ್ವ್ ಬ್ಯಾಂಕ್ ತಿಳಿಸಿದೆ ಹಾಗೂ 25 ಸಾವಿರಕ್ಕಿಂತ ಕಡಿಮೆ ಮೊತ್ತದ ಸಾಲಗಳ ಬಡ್ಡಿದರವನ್ನು ಇನ್ನು ಮುಂದೆಯೂ ರಿಸರ್ವ್ ಬ್ಯಾಂಕ್ ನಿಷ್ಕರ್ಷೆ ಮಾಡುತ್ತದೆ.

ಬ್ಯಾಂಕುಗಳಲ್ಲಿ ಹೆಚ್ಚುತ್ತಿರುವ ವಂಚನೆ ಪ್ರಕರಣಗಳನ್ನು ಗಮನಿಸಿ, ಬ್ಯಾಂಕುಗಳು ಹೊಸ ಠೇವಣಿಗಳ ಮೇಲೆ ಹೆಚ್ಚಿನ ನಿಗಾ ವಹಿಸಬೇಕೆಂದು ರಿಸರ್ವ್ ಬ್ಯಾಂಕ್ ತಿಳಿಸಿದೆ. ಶಾಖಾ ವ್ಯವಸ್ಥಾಪಕರು ಅಥವಾ ಠೇವಣಿ ಶಾಖೆಯ ವಿಭಾಗದ ಹಿರಿಯ ಅಧಿಕಾರಿಗಳು ಹೊಸದಾಗಿ ತೆರೆಯಲಾದ ಠೇವಣಿ ಖಾತೆಗಳನ್ನು ಕನಿಷ್ಠ ಮೂರು ತಿಂಗಳುಗಳ ವರೆಗೆ ಎಚ್ಚರಿಕೆಯಿಂದ ಗಮನಿಸಬೇಕು ಮತ್ತು ಬ್ಯಾಂಕಿನ ಚಾಲ್ತಿ, ಉಳಿತಾಯ, ನಗದು ಉದರಿ ಮತ್ತು ಓವರ್ ಡ್ರಾಫ್ಟ್ ಖಾತೆಗಳಲ್ಲಿ ಗ್ರಾಹಕರು 10 ಲಕ್ಷಕ್ಕಿಂತಲೂ ಹೆಚ್ಚು ನಗದನ್ನು ಜಮಾ ಮಾಡಿದ್ದರೆ ಅಥವಾ ತೆಗೆದಿದ್ದರೆ ಅಂತಹ ವ್ಯವಹಾರಗಳನ್ನು ಎಚ್ಚರಿಕೆಯಿಂದ ಗಮನಿಸಬೇಕೆಂದು ತಿಳಿಸಿದೆ.

**ವಂಚನೆ ತನಿಖೆಗೆ ವಿಶೇಷ ಮಂಡಲಿ**

ಹಣಕಾಸು ವಂಚನೆ ಪ್ರಕರಣಗಳ ತನಿಖೆಗೆ ಕೇಂದ್ರ ಸರ್ಕಾರ ವಿಶೇಷಮಂಡಳಿಯೊಂದನ್ನು ಸ್ಥಾಪಿಸಲು ನಿರ್ಧರಿಸಿದೆ. ಯುನೈಟೆಡ್ ಕಿಂಗ್‌ಡಮ್‌ನ ಮಾದರಿಯಲ್ಲೇ ಇದನ್ನು ಸ್ಥಾಪಿಸಲು ಉದ್ದೇಶವಿದ್ದು ಹಣಕಾಸು ವ್ಯವಹಾರಗಳ ವಂಚನೆ ಪ್ರಕರಣಗಳ ತನಿಖೆಯ ಜವಾಬ್ದಾರಿಯನ್ನು ಈ ಮಂಡಳಿಗೆ ವಹಿಸಿಕೊಡಲಾಗುವುದು. ಸುಪ್ರೀಂ ಕೋರ್ಟ್‌ನ ನ್ಯಾಯಾಧೀಶರೊಬ್ಬರು ಈ ಮಂಡಳಿಯ ಮುಖ್ಯಸ್ಥರಾಗಿರುತ್ತಾರೆ. ಇದರ ಸ್ಥಾಪನೆಗೆ ಶೀಘ್ರದಲ್ಲೇ ಮಸೂದೆಯೊಂದನ್ನು ಮಂಡಿಸಲಾಗುವುದು ಮತ್ತು ಹಣಕಾಸು ವಂಚನೆಯ ಪ್ರಕರಣಗಳನ್ನು ಇಂಡಿಯನ್ ಪೀನಲ್ ಕೋಡ್‌ನಲ್ಲಿರುವ ವಂಚನೆ ಪ್ರಕರಣಗಳಿಂದ ಪ್ರತ್ಯೇಕಿಸಲಾಗುವುದು.

**ವಿದೇಶಿ ಋಣ ಸೇವೆ**

ಕೇಂದ್ರ ಸರ್ಕಾರ ಅಂತಾರಾಷ್ಟ್ರೀಯ ಹಣ ನಿಧಿಯಿಂದ ಪಡೆದ ಸಾಲವನ್ನು ಹೊರತುಪಡಿಸಿ ಇತರ ವಿದೇಶಿ ಮೂಲದ ಸಾಲಗಳ ಋಣ ಸೇವೆಯನ್ನು ಇನ್ನು ಮುಂದೆ ವಾಣಿಜ್ಯ ಬ್ಯಾಂಕುಗಳು ನಿರ್ವಹಿಸಲಿವೆ. ಆದರೆ ಇದರಿಂದ ದೇಶದ ವಿದೇಶಿ ವಿನಿಮಯ ನಿರ್ವಹಣೆಯಲ್ಲಿ ರಿಸರ್ವ್ ಬ್ಯಾಂಕಿನ ಪಾತ್ರವೇನೂ ಗೌಣವಾಗುವುದಿಲ್ಲ. ಸರ್ಕಾರದ ಇಲಾಖೆಗಳು, ಕೇಂದ್ರೋದ್ಯಮಗಳು ತಮ್ಮ ದೈನಂದಿನ ವಿದೇಶಿ ವಿನಿಮಯ ಪಾವತಿ/ರಶೀತಿಗಳಿಗೆ ಮಾತ್ರ ವಾಣಿಜ್ಯ ಬ್ಯಾಂಕುಗಳ ಸೇವೆಯನ್ನು ಬಳಸಿಕೊಳ್ಳಬೇಕು. ಇತ್ತೀಚಿನ ದಿನಗಳಲ್ಲಿ ಸರಕುಗಳ ಆಮದಿಗೆ ಪಾವತಿ ಮಾಡಲು ಸರ್ಕಾರ ಮುಕ್ತ ಮಾರುಕಟ್ಟೆಯಲ್ಲಿ ವಿದೇಶಿ ವಿನಿಮಯವನ್ನು ಕೊಳ್ಳುತ್ತಿತ್ತು.

ಸರ್ಕಾರದ ಈ ನಿರ್ಧಾರದಿಂದಾಗಿ ವಾಣಿಜ್ಯ ಬ್ಯಾಂಕುಗಳ ವಿದೇಶಿ ವಿನಿಮಯ ವ್ಯವಹಾರ ವೃದ್ಧಿಸಲಿದೆ. ವಿದೇಶಿ ಋಣ ಸೇವೆಗೆ ವಾಣಿಜ್ಯ ಬ್ಯಾಂಕುಗಳ ಆಯ್ಕೆಯನ್ನು ಸರ್ಕಾರದ ಈ ನಿರ್ಧಾರದಿಂದಾಗಿ ವಾಣಿಜ್ಯ ಬ್ಯಾಂಕುಗಳ ವಿದೇಶಿ ವಿವೇಚನೆಗೇ ಬಿಟ್ಟಿದೆ.

**ಮಾಲೆಗಾಂ ಸಮಿತಿ ವರದಿ**

ಷೇರು ಪೇಟೆಯ ಇತ್ತೀಚಿನ ಹಗರಣವಾದ ಎಂ. ಎಸ್. ಪ್ರಕರಣದ ನಂತರ ಸೆಬಿಯು ಪ್ರಾಥಮಿಕ ಮಾರುಕಟ್ಟೆಯ ಸುಧಾರಣೆಗೆ ನೇಮಿಸಿದ್ದ ಮಾಲೆಗಾಂ ಸಮಿತಿ ತನ್ನ ವರದಿ ಸಲ್ಲಿಸಿದೆ. ಹೂಡಿಕೆದಾರರ ಹಿತರಕ್ಷಣೆಯ ದೃಷ್ಟಿಯಿಂದ ಬಂಡವಾಳ ಮಾರುಕಟ್ಟೆ ಪ್ರವೇಶಿಸುವ ಕಂಪನಿಯ ವಿವರಣಪತ್ರ ಹೆಚ್ಚು ಪಾರದರ್ಶಕವಾಗಿರಬೇಕೆಂದು ಸಮಿತಿ ಸೂಚಿಸಿದೆ. ಅದರಂತೆ ಕಂಪನಿ ತನ್ನ ವಿವರಣ ಪತ್ರದಲ್ಲಿ ಹಿಂದಿನ ಮೂರು ವರ್ಷಗಳಲ್ಲಿ ಪ್ರತಿ ಷೇರಿನ ಗಳಿಕೆ, ನಿವ್ವಳ ಸಂಪತ್ತಿನ ಮೇಲಿನ ಪ್ರತಿಫಲ ಮೊದಲಾದ ವಿವರಗಳನ್ನು ನೀಡುವುದು ಕಡ್ಡಾಯವಾಗುತ್ತದೆ. ಹೊಸದಾಗಿ ಬಂಡವಾಳವನ್ನು

ವಿತ್ತುವ ಕಂಪನಿಗಳು ತಾವು ಮುಂದೆ ಗಳಿಸಬಹುದಾದ ಆದಾಯದ ಆಧಾರದ ಮೇಲೆ ಷೇರುಗಳ ಮೌಲ್ಯವನ್ನು ನಿರ್ಧರಿಸುವುದನ್ನು ನಿರ್ಬಂಧಿಸಬೇಕೆಂದು ಸಮಿತಿ ಸೂಚಿಸಿದೆ. ಅಲ್ಲದೆ ಅದೇ ಗುಂಪಿನ ಕಂಪನಿಗಳೊಂದಿಗೆ ಸರಕು/ಸೇವೆಗಳ ಮಾರಾಟ ಮತ್ತು ಖರೀದಿ ನಡೆದಿದ್ದಲ್ಲಿ ಮತ್ತು ಅಂತಹ ವ್ಯವಹಾರ ಒಟ್ಟು ವ್ಯವಹಾರದ ಶೇ. 10ನ್ನು ಮೀರಿದಲ್ಲಿ ಅದರ ವಿವರಗಳು ವಿವರಣಪತ್ರದಲ್ಲಿರಬೇಕೆಂದು ಸಮಿತಿ ತಿಳಿಸಿದೆ.

## ಷೇರುಗಳ ಮೇಲಿನ ಸಾಲದ ಮೊತ್ತ ಏರಿಕೆ

ಷೇರು ಮತ್ತು ಸಾಲಪತ್ರಗಳ ಆಧಾರದ ಮೇಲೆ ಬ್ಯಾಂಕುಗಳು ತಮ್ಮ ಹೆಸರಿಗೆ ಪ್ರತಿಭೂತಿಗಳನ್ನು ವರ್ಗಾವಣೆ ಮಾಡಿಸಿಕೊಳ್ಳದೆ ವ್ಯಕ್ತಿಗತ ಸಾಲಗಾರರಿಗೆ ನೀಡಬಹುದಾದ ಸಾಲದ ಮೊತ್ತವನ್ನು ಮೂರು ಲಕ್ಷ ರೂಪಾಯಿಗಳಿಂದ ಐದು ಲಕ್ಷ ರೂಪಾಯಿಗಳಿಗೆ ಏರಿಸಿ ರಿಸರ್ವ್ ಬ್ಯಾಂಕ್ ಆದೇಶ ಹೊರಡಿಸಿದೆ. ಆದರೆ ಅಂತಹ ಗ್ರಾಹಕರಿಗೆ ನೀಡಬಹುದಾದ ಗರಿಷ್ಠ ಸಾಲದ ಮೊತ್ತವಾದ ಐದು ಲಕ್ಷ ರೂಪಾಯಿಗಳಲ್ಲಿ ಯಾವುದೇ ಬದಲಾವಣೆ ಮಾಡಿಲ್ಲ.

ಬ್ಯಾಂಕುಗಳು ಷೇರು ದಲ್ಲಾಳಿಗಳಿಗೆ ನೀಡುವ ಸಾಲದ ನಿಯಮಗಳನ್ನು ಸಡಿಲಗೊಳಿಸಲಾಗಿದೆ. ಈ ಹಿಂದೆ ದಲ್ಲಾಳಿಗಳು ಮೂರು ತಿಂಗಳುಗಳಿಗೂ ಹೆಚ್ಚು ಕಾಲ ವ್ಯಾಪಾರೋದ್ದೇಶದ ದಾಸ್ತಾನು ಇರಿಸಿಕೊಂಡಿದ್ದಲ್ಲಿ ಅದನ್ನು ಬ್ಯಾಂಕುಗಳ ಹೆಸರಿಗೆ ವರ್ಗಾಯಿಸಬೇಕಿತ್ತು. ಈಗ ಆ ಅವಧಿಯನ್ನು ಒಂಬತ್ತು ತಿಂಗಳುಗಳಿಗೆ ಏರಿಸಲಾಗಿದೆ. ಆದರೆ ಇದು ಸೆಬಿಯ ನೋಂದಾಯಿತ ದಲ್ಲಾಳಿಗಳಿಗೆ (ಅವರು ಷೇರು ವಿನಿಮಯ ಕೇಂದ್ರದ ಸದಸ್ಯರು ಆಗಿರಬೇಕು) ಮಾತ್ರ ಅನ್ವಯಿಸುತ್ತದೆ.

## ಗಣಕೀಕರಣಕ್ಕಾಗಿ ಭಾರತದ ಆರು ಬ್ಯಾಂಕುಗಳಿಗೆ ವಿಶ್ವ ಬ್ಯಾಂಕ್ ಸಾಲ

ಭಾರತದ ಆರು ರಾಷ್ಟ್ರೀಕೃತ ಬ್ಯಾಂಕುಗಳು (ಬ್ಯಾಂಕ್ ಆಫ್ ಇಂಡಿಯಾ, ಇಂಡಿಯನ್ ಓವರ್‌ಸೀಸ್ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್, ಅಲಹಾಬಾದ್ ಬ್ಯಾಂಕ್, ದೇನಾ ಬ್ಯಾಂಕ್ ಮತ್ತು ಇಂಡಿಯನ್ ಬ್ಯಾಂಕ್) ಗಣಕೀಕರಣಕ್ಕಾಗಿ ವಿಶ್ವಬ್ಯಾಂಕಿನಿಂದ ಒಟ್ಟು 700 ಕೋಟಿ ರೂಪಾಯಿ ಸಾಲ ಪಡೆಯಲಿವೆ.

ಇದೇ ಮೊದಲ ಬಾರಿಗೆ ಹಣಕಾಸು ಕ್ಷೇತ್ರದ ಅಭಿವೃದ್ಧಿಗಾಗಿವಿಶ್ವ ಬ್ಯಾಂಕಿನಿಂದ ಪಡೆದ ಸಾಲವನ್ನು 'ರೀಇಂಬರ್ಸ್‌ಮೆಂಟ್ ರೂಟ್'ನ ಮೂಲಕ ವಿಸ್ತರಿಸಲಾಗಿದೆ. ಅದರಂತೆ ಬ್ಯಾಂಕುಗಳು ಈ ಹಣವನ್ನು ನೇರವಾಗಿ ಕೇಂದ್ರ ಸರ್ಕಾರದಿಂದ ಪಡೆಯುವುದಿಲ್ಲ. ಬದಲಾಗಿ ಅವುಗಳ ಗಣಕೀಕರಣದ ವೆಚ್ಚವನ್ನು ಭಾರತದ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್ (ಐ.ಡಿ.ಬಿ.ಐ) ಮೂರು ವರ್ಷಗಳಿಗೆ ತುಂಬಿ ಕೊಡುತ್ತದೆ. ನಂತರ ಐ.ಡಿ.ಬಿ.ಐ. ಆ ಹಣವನ್ನು ವಿಶ್ವಬ್ಯಾಂಕಿನಿಂದ ಪಡೆದುಕೊಳ್ಳುತ್ತದೆ. ರಿಸರ್ವ್ ಬ್ಯಾಂಕಿನ ಪರಿಯೋಜನಾ ವೀಕ್ಷಣ ಕೇಂದ್ರ ಗಣಕೀಕರಣದ ಪ್ರಗತಿಯ ಮೇಲ್ವಿಚಾರಣೆ ಮಾಡುತ್ತದೆ. 1994ರ ಮಾರ್ಚ್ 31ರಂದು ಆಯಾ ಬ್ಯಾಂಕುಗಳು ಹೊಂದಿದ್ದ ದುಡಿಯುವ ಬಂಡವಾಳದ ಆಧಾರದ ಮೇಲೆ ಸಾಲದ ಮೊತ್ತವನ್ನು ನಿರ್ಧರಿಸಲಾಗಿದೆ. ಈ ಸಂಬಂಧ ಮೇಲೆ ತಿಳಿಸಿದ ಆರು ಬ್ಯಾಂಕುಗಳು, ಐ.ಡಿ.ಬಿ.ಐ ಮತ್ತು ಕೇಂದ್ರ ಸರ್ಕಾರ ತ್ರಿಪಕ್ಷೀಯ ಒಪ್ಪಂದಕ್ಕೆ ಸಹಿ ಹಾಕಿವೆ.

## ವಿಶ್ವದ 1,000 ದೊಡ್ಡ ಬ್ಯಾಂಕುಗಳಲ್ಲಿ ಭಾರತದ 10 ಬ್ಯಾಂಕುಗಳು

'ದಿ ಬ್ಯಾಂಕರ್' ಪತ್ರಿಕೆ ನಡೆಸಿದ ಸರ್ವೆಯ ಪ್ರಕಾರ ವಿಶ್ವದ 1,000 ದೊಡ್ಡ ಬ್ಯಾಂಕುಗಳ ಪಟ್ಟಿಯಲ್ಲಿ ಭಾರತದ ಹತ್ತು ಬ್ಯಾಂಕುಗಳು ಸ್ಥಾನ ಪಡೆದುಕೊಂಡಿವೆ. ಭಾರತದ ಪ್ರಮುಖ ಬ್ಯಾಂಕಾದ ಭಾರತೀಯ ಸ್ಟೇಟ್ ಬ್ಯಾಂಕ್ 240ನೆಯ ಸ್ಥಾನವನ್ನು ಪಡೆದುಕೊಂಡಿದೆ. ನಂತರದ ಸ್ಥಾನಗಳನ್ನು ಬ್ಯಾಂಕ್ ಆಫ್ ಇಂಡಿಯಾ (565) ಕೆನರಾ ಬ್ಯಾಂಕ್ (583), ಬ್ಯಾಂಕ್ ಆಫ್ ಬರೋಡ (659), ಸಿಂಡಿಕೇಟ್ ಬ್ಯಾಂಕ್ (721), ಪಂಜಾಬ್ ನ್ಯಾಷನಲ್ ಬ್ಯಾಂಕ್ (759), ಯುಕೊ ಬ್ಯಾಂಕ್ (904), ಯುನೈಟೆಡ್ ಬ್ಯಾಂಕ್ ಆಫ್ ಇಂಡಿಯಾ (963) ಮತ್ತು ಮಹಾರಾಷ್ಟ್ರ ರಾಜ್ಯ ಸಹಕಾರಿ ಬ್ಯಾಂಕ್ (985) ಪಡೆದುಕೊಂಡಿವೆ. ಬ್ಯಾಂಕುಗಳ ಟೈಯರ್-1 ಬಂಡವಾಳದ ಆಧಾರದ ಮೇಲೆ ನಡೆಸಿದ ಈ ಸರ್ವೆಯ ಪ್ರಕಾರ ಸನ್ವಾ ಬ್ಯಾಂಕ್ ಮೊಟ್ಟ ಮೊದಲಿನ ಸ್ಥಾನ ಪಡೆದಿದೆ. ಈ ಅಂತಾರಾಷ್ಟ್ರೀಯ ಬ್ಯಾಂಕ್ ಹಿಂಜರಿಕೆಯಿಂದ ಚೇತರಿಸಿಕೊಂಡು ಬೆಳವಣಿಗೆಯ ಗತಿ ಕಾಣಿಸಿಕೊಂಡಿದೆ ಎಂದೂ ಈ ಸರ್ವೆ ತಿಳಿಸಿದೆ. ●

---



---

# ಸ್ಪರ್ಧೆಯ ಯುಗದಲ್ಲಿ ಬದಲಾಗ ಬೇಕಾದ ಭಾರತೀಯ ಬ್ಯಾಂಕುಗಳ ಆಡಳಿತ ವಿಧಾನ

[17ನೇ ಪುಟದಿಂದ ಮುಂದುವರಿದುದು]

ವಾಗಿರುವ ವಿದೇಶೀ ಹಾಗೂ ಖಾಸಗೀ ಬ್ಯಾಂಕುಗಳತ್ತ ಆತ ಹೋಗುವುದು ಸಹಜ. ಒಮ್ಮೆ ಗ್ರಾಹಕ ನಮ್ಮಿಂದ ಅತ್ತ ಹೋದ ನೆಂದರೆ, ಅಲ್ಲಿ ಸೇವಾ ಶುಲ್ಕಗಳು ಎಷ್ಟೇ ಹೆಚ್ಚಾದರೂ ಪುನಃ ಹಿಂದಿರುಗಿ ನೋಡಲಾರ. ಅವರು ನೀಡುವ ತ್ವರಿತ ಸೇವೆ ಹಾಗೂ ತಾಂತ್ರಿಕ ಸಲಹೆಗಳ ಮುಂದೆ ಆತ ನೀಡುವ ಸೇವಾ ಶುಲ್ಕ ಆತನಿಗೆ ನಗಣ್ಯವೆನಿಸುತ್ತದೆ. ಇಂತಹ ಋಣಾತ್ಮಕ ಬೆಳವಣಿಗೆ ಭಾರತೀಯ ಬ್ಯಾಂಕುಗಳ ಪಾಲಿಗೆ ತಲೆ ಎತ್ತಲಾರದ ಹೊಡೆತ ನೀಡುವುದರಲ್ಲಿ ಅನುಮಾನವೇ ಇಲ್ಲ. ಆದ್ದರಿಂದ ಸುದೀರ್ಘ ಆಡಳಿತ ರಚನೆಗಳಿಗೆ ಬದಲಾಗಿ ಕನಿಷ್ಠ ಹಂತಗಳ 3-4 ಸ್ತರಗಳ ಸರಳ ಆಡಳಿತ ವಿಧಾನಗಳನ್ನು ಜಾರಿಗೆ ತಂದಲ್ಲಿ ವಿದೇಶೀ ಬ್ಯಾಂಕುಗಳ ಸವಾಲನ್ನು ಸಮರ್ಥವಾಗಿ ಎದುರಿಸಬಹುದು.

ಹೊಸ ಸಾಲಗಳ ಮಂಜೂರಿಗಾಗಿ ಅರ್ಜಿಗಳು ಬಂದಾಗ ಅವು ಗಳನ್ನು ಶಾಖಾ ಹಂತದಲ್ಲಿ ಸಂಬಂಧಿಸಿದ ಅಧಿಕಾರಿ ಪರಿಶೀಲಿಸಿ ನೇರವಾಗಿ ಸಂಬಂಧಪಟ್ಟ ವಲಯ ಮುಖ್ಯಸ್ಥ ಅಥವಾ ಋಣ ಮಂಜೂರಾತಿ ಮೇಲ್ವಿಚಾರಣಾ ವಿಭಾಗಕ್ಕೆ ಕಳುಹಿಸಿ, ಅಲ್ಲಿಯೇ ಅದರ ಅಂತಿಮ ನಿರ್ಣಯವನ್ನು ನೀಡುವಂತೆ ಮಾಡಬೇಕು. ಈ ಎಲ್ಲ ಕಾರ್ಯ ವಿಧಾನಗಳೂ ಗರಿಷ್ಠ 18-20 ದಿನಗಳಲ್ಲಿ ಮುಗಿದು, ಗ್ರಾಹಕನಿಗೆ ತಲುಪುವಂತಾದರೆ ನಮ್ಮ ಬ್ಯಾಂಕುಗಳ ಇಂದಿನ ಬಹು ಪಾಲು ಸಮಸ್ಯೆ ಮುಗಿದಂತೆಯೇ.

ಭಾರತೀಯ ಬ್ಯಾಂಕುಗಳ ಪ್ರಸ್ತುತ ಪರಿಸ್ಥಿತಿ ಸುಧಾರಿಸ ಬೇಕಾದರೆ, ಉದ್ಯೋಗಿಗಳ ಮನಸ್ಥಿತಿಯೂ ವಿಕಾಸ ಹೊಂದ ಬೇಕಿದೆ. ಸೇವಾ ಮನೋಭಾವ, ಕಾರ್ಯತತ್ಪರತೆ, ನಿಷ್ಠೆ ಹಾಗೂ ಪ್ರಾಮಾಣಿಕತೆಯ ಅವಶ್ಯಕತೆ ಹೆಚ್ಚಾಗಿದೆ. ಅದಿಲ್ಲದ ಸಿಬ್ಬಂದಿ ವರ್ಗದಿಂದ ಆ ಸಂಸ್ಥೆಗೆ ನಷ್ಟ ಹಾಗೂ ಕಳಂಕ. ಹಾಗಾಗಿ ಆಡಳಿತ ರಚನೆಯ ಪರಿಷ್ಕರಣೆಯ ಸಂದರ್ಭದಲ್ಲಿ ಈ ವಿಷಯಗಳತ್ತ ಗಮನಹರಿಸಿ ಪ್ರಾಮಾಣಿಕ ಸಿಬ್ಬಂದಿಯ ಸೇವೆ ಯನ್ನು ಪರಿಗಣಿಸಿ ಸೇವಾಜ್ಯೇಷ್ಠತೆ, ಮೀಸಲಾತಿ ಇತ್ಯಾದಿ ಕಂದಕ ಗಳನ್ನು ಮೀರಿ ಬದಲಾವಣೆ ತಂದರೆ ನಮ್ಮ ಭಾರತೀಯ ಬ್ಯಾಂಕು ಗಳ ಭವಿಷ್ಯ ಉತ್ತಮಗೊಳ್ಳುತ್ತದೆ.

ಸಾಲ ಮಂಜೂರಾತಿ, ವಸೂಲಾತಿ ಮುಂತಾದುವುಗಳಿಗೆ ಈಗಿನ ವಿಧಾನಕ್ಕಿಂತ, ತಜ್ಞರ ಸಮಿತಿಯೊಂದನ್ನು ರಚಿಸಿ, ವಲಯ ಕಛೇರಿ ಗಳ ಮಟ್ಟದಲ್ಲಿ ಶಾಖೆಗಳಿಂದ ನೇರವಾಗಿ ಇಲ್ಲಿಗೆ ಅರ್ಜಿಗಳು ಬರು ವಂತೆಯೂ ಅಂತಿಮ ತೀರ್ಮಾನವನ್ನು ಇದೇ ಸಮಿತಿ ತೆಗೆದು ಕೊಳ್ಳುವಂತೆಯೂ ಮಾಡಬೇಕು. ಗ್ರಾಹಕರಿಗೆ ಬೇಕಾದ ತಾಂತ್ರಿಕ ಮಾಹಿತಿಯನ್ನು ನೀಡುವತ್ತಲೂ ಈ ಸಮಿತಿ ಗಮನ ಹರಿಸಬೇಕು. ಹೀಗಾದಾಗ ಮಾತ್ರ ವಿದೇಶೀ ಮತ್ತು ಖಾಸಗಿ ಬ್ಯಾಂಕುಗಳ ಜತೆ ಸ್ಪರ್ಧಿಸಲು ಸಾಧ್ಯ.

ಕಣ್ಣು ಕೋರೈಸುವಂತೆ ಬೆಳವಣಿಗೆ ಸಾಧಿಸುತ್ತಿರುವ ವಿದೇಶಿ ಮತ್ತು ಹೊಸ ಖಾಸಗಿ ಬ್ಯಾಂಕುಗಳ ಆಡಳಿತ ವಿಧಾನವನ್ನು ಪರಿ ಶೀಲಿಸಿ, ಅದಕ್ಕಿಂತ ಹೆಚ್ಚಿನ ಪರಿಣಾಮಕಾರಿಯಾದ ರೀತಿಯಲ್ಲಿ ಭಾರತೀಯ ಬ್ಯಾಂಕುಗಳು ತಮ್ಮ ಆಡಳಿತ ರಚನೆಯನ್ನು ಪುನ ರ್ರಚಿಸಬೇಕು. ಇಲ್ಲವಾದಲ್ಲಿ ಭವಿಷ್ಯ ಅಂಧಕಾರದಲ್ಲಿ ಅಂತರ್ಧಾನ ವಾಗುವುದು ಖಚಿತ.

ಈ ಎಲ್ಲ ವಿಷಯಗಳನ್ನು ಪರಿಶೀಲಿಸಿದಾಗ ವಿದೇಶಿ ಮತ್ತು ಹೊಸ ಖಾಸಗಿ ಬ್ಯಾಂಕುಗಳ ಜತೆ ಸ್ಪರ್ಧಿಸಲು ಭಾರತೀಯ ಬ್ಯಾಂಕುಗಳ ಆಡಳಿತ ರಚನೆಯಲ್ಲಿ ಬದಲಾವಣೆ ಅಗತ್ಯವಾಗಿದೆ ಎನ್ನುವುದು ಸಾಬೀತಾಗುತ್ತದೆ. ●

## ಲೇಖಕರಿಗೆ ಸೂಚನೆ

1 ಹಣ ಮತ್ತು ಬ್ಯಾಂಕಿಂಗ್ ವಿಷಯಗಳನ್ನು ಕುರಿತ ಲೇಖನ ಗಳಿಗೆ ಸ್ವಾಗತವುಂಟು. ಪ್ರಕಟವಾದ ಲೇಖನಗಳಿಗೆ ಯಾವುದೇ ಸಂಭಾವನೆ ನೀಡಲು ಸದ್ಯಕ್ಕೆ ಸಾಧ್ಯವಿಲ್ಲ.

2 ಲೇಖನ ಸ್ವತಂತ್ರವಾಗಿರಬೇಕು. ಈ ಹಿಂದೆ ಎಲ್ಲೂ ಪ್ರಕಟ ವಾಗಿರಬಾರದು.

3 ಅನ್ಯಭಾಷೆಯಿಂದ ಭಾಷಾಂತರವಾದ ಲೇಖನಕ್ಕೂ ಸ್ವಾಗತ ವುಂಟು. ಆದರೆ ಮೂಲ ಲೇಖಕರ/ಪ್ರಕಾಶಕರ ಅನುಮತಿ ಪತ್ರ ವನ್ನು ಭಾಷಾಂತರಗೊಂಡ ಲೇಖನಕ್ಕೆ ಲಗತ್ತಿಸಿರಬೇಕು. ಮೂಲ ಲೇಖನ ಪ್ರತಿಯೊಂದನ್ನೂ ಲಗತ್ತಿಸಬೇಕು.

4 ಯಾವುದೇ ಲೇಖನವನ್ನು ಪ್ರಕಟಿಸುವ ಅಥವಾ ಪ್ರಕಟಪಡಿಸ ದಿರುವ, ಯುಕ್ತ ಬದಲಾವಣೆಗಳನ್ನು ಮಾಡುವ ಅಧಿಕಾರ ಸಂಪಾದಕರಿಗೆ ಇರುತ್ತದೆ.

5 ಅಸ್ವೀಕೃತ ಲೇಖನವನ್ನು ಹಿಂದಿರುಗಿಸುವ ವ್ಯವಸ್ಥೆಯಿಲ್ಲ. ಸ್ವೀಕೃತಿ/ಅಸ್ವೀಕೃತಿಯ ಬಗ್ಗೆ ಪತ್ರ ಬರೆಯಲಾಗುವುದಿಲ್ಲ.

6 ಲೇಖನವನ್ನು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಸಾಕಷ್ಟು ಮಾರ್ಜಿನ್ ಬಿಟ್ಟು ಬರೆದಿಡಬೇಕು/ಅಚ್ಚು ಮಾಡಿರ ಬೇಕು. ಲೇಖನ ಸಾಮಾನ್ಯವಾಗಿ ಆರು ಪುಟಗಳಿಗಿಂತ ಉದ್ದವಾಗಿರ ಬಾರದು.

